# ಆಸ್ತಿಕಪರ್ವ

## (ನಾಸ್ತಿಕವಾದದ ಖಂಡನೆ)

ಮಹಾಮಹೋಪಾಧ್ಯಾಯ ವಿದ್ವಾನ್ ಎನ್. ರಂಗನಾಥ ಶರ್ಮಾ





ಶ್ರೀ ಭಗವತ್ಪಾದ ಪ್ರಕಾಶನ (ರಿ.)
ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನ, ಮಠದೇವಳ, ಶಿರಸಿ

# ಆಸ್ತಿಕಪರ್ವ

## (ನಾಸ್ತಿಕವಾದದ ಖಂಡನೆ)


ಮಹಾಮಹೋಪಾಧ್ಯಾಯ

**ವಿದ್ವಾನ್ ಎನ್. ರಂಗನಾಥ ಶರ್ಮಾ**





**ಶ್ರೀ ಭಗವತ್ಪಾದ ಪ್ರಕಾಶನ (ರಿ.)**

ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನ, ಮಠದೇವಳ,

ಶಿರಸಿ- ೫೮೧ ೩೩೬ (ಉ. ಕ.)

*"ASTIKAPARVA" written by Mahamahopadhaya Vd. N. Ranganath Sharma, Published by Shri Bhagavatpada Prakashana, Shri Sonda Swarnavalli Mahasamstanam, Mathadevala, Sirsi and Printed at The Chetana Printing & Publishing Co-op. Society Ltd., Sirsi (U. K.)*

ಪ್ರಥಮ ಮುದ್ರಣ : ೨೦೦೭

ಪುಟಗಳು : xii+ ೬೯

ಪ್ರತಿಗಳು : ೧,೦೦೦

ಬೆಲೆ : **ರೂ. ೫೦/-**

ಪ್ರಕಾಶಕರು : **ಶ್ರೀ ಭಗವತ್ಪಾದ ಪ್ರಕಾಶನ (ರಿ.)**

ಅಧ್ಯಕ್ಷರು:

**ಶ್ರೀಮಜ್ಜಗದ್ಗುರು ಶಂಕರಾಚಾರ್ಯ**

**ಶ್ರೀ ಶ್ರೀಮದ್ ಗಂಗಾಧರೇಂದ್ರ ಸರಸ್ವತೀ ಮಹಾಸ್ವಾಮಿಗಳು**

ಕಾರ್ಯದರ್ಶಿ: ಪ್ರಾ. ಪದ್ಮನಾಭ ಈಶ್ವರ ಹೆಗಡೆ, ಗಮೇನ್ಮನೆ

ಸಹಕಾರ್ಯದರ್ಶಿ: ಶ್ರೀ ಆಯ್. ಎಂ. ಹೆಗಡೆ, ಶಿರಸಿ

ಸದಸ್ಯರು :

ಶ್ರೀ ನಾ. ಸು. ಭರತನಹಳ್ಳಿ, ಪ್ರಾ. ಕೆ. ವಿ. ಭಟ್ಟ, ಶಿರಸಿ,

ಡಾ. ಜಿ. ಎಂ. ಹೆಗಡೆ, ಧಾರವಾಡ

ಶ್ರೀ ವನರಾಗ ಶರ್ಮಾ, ಯಲ್ಲಾಪುರ

ಶ್ರೀ ಎಂ. ಸಿ. ಹೆಗಡೆ, ಸಿರ್ಸಿಮಕ್ಕಿ,

ಶ್ರೀ ಡಿ. ಜಿ. ಭಟ್ಟ, ಕೋಟೇಮನೆ (ಹುಬ್ಬಳ್ಳಿ),

ಮುದ್ರಣ : **ದಿ ಚೇತನಾ ಪ್ರಿಂಟಿಂಗ್ ಆ್ಯಂಡ್ ಪಬ್ಲಿಶಿಂಗ್**

**ಕೋ-ಆಪರೇಟಿವ್ ಸೊಸ್ಶಾಟಿ ಲಿ.,**

ಸಿ. ಪಿ. ಬಝಾರ್, **ಶಿರಸಿ** - ೫೮೧ ೪೦೧ (ಉ. ಕ.)

✆ : ೦೮೩೮೪- **೨೨೭೦೦೨**

श्री लक्ष्मीनृसिंहः



श्री नारायणः

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯ, ಪದವಾಕ್ಯಪ್ರಮಾಣ ಪಾರಾವಾರ ಪಾರೀಣ
ಯಮನಿಯಮಾಸನ ಪ್ರಾಣಾಯಾಮಪ್ರತ್ಯಾಹಾರ ಧ್ಯಾನಧಾರಣಸಮಾಧ್ಯಷ್ಟಾಂಗಯೋಗಾನುಷ್ಠಾನನಿಷ್ಠ
ಷಣ್ಮತವ್ಯವಸ್ಥಾಪನಾಚಾರ್ಯ, ತಪಶ್ಚಕ್ರವರ್ತ್ಯನಾದ್ಯವಿಚ್ಛಿನ್ನ ಶ್ರೀ ಶ್ರೀಮದ್ ಜಗದ್ಗುರು
ಶಂಕರಾಚಾರ್ಯ ಶಿಷ್ಯ ಶ್ರೀ ಭಾಸ್ಕರೇಂದ್ರ ಸರಸ್ವತೀ ಕರಕಮಲಸಂಜಾತ ಶ್ರೀ ಶ್ರೀಮತ್ ವಿಶ್ವವಂದ್ಯ
ಸರಸ್ವತೀ ಗುರುಪರಂಪರಾಪ್ರಾಪ್ತ ಸಕಲನಿಗಮಾಗಮಸಾರಹೃದಯ ಸಾಂಖ್ಯತ್ರಯಪ್ರತಿಪಾದಕ
ಕ್ರಮಾಗತಶ್ರೌತಸ್ಮಾರ್ತಕರ್ಮಮಾರ್ಗವ್ಯವಸ್ಥಾಪಕ, ಆಶೇಷತ್ರಯಂತಾದ್ಯದ್ವೈತಸಿದ್ಧಾಂತಪ್ರಬಂಧ
ಪ್ರವರ್ತಕ ಆದಿರಾಜಧಾನೀ ವಿದ್ಯಾನಗರ ಮಹಾರಾಜಧಾನೀ ಶ್ರೀಮತ್
ಸುಧಾಪುರವರಸಿಂಹಾಸನಾಧೀಶ್ವರ ಸರ್ವತಂತ್ರ ಸ್ವತಂತ್ರ ವ್ಯಾಖ್ಯಾನಸಿಂಹಾಸನಾಧಿಷ್ಠಿತ,
ರಾಜಾಧಿರಾಜದೇಶಿಕ ಗೋಕರ್ಣಮಂಡಲಾಧೀಶ್ವರ, ಸಹ್ಯಾದ್ರಿಪುರವರಾಧೀಶ್ವರ,
ಶಾಲ್ಮಲೀತೀರವಾಸ, ಶ್ರೀಮಲ್ಲಕ್ಷ್ಮೀನೃಸಿಂಹ ಚಂದ್ರಮೌಳಿಪದಪಂಕೇರುಹರಸಗ್ರಾಸಾಳಿವನ್ಮಾನಸ
ಶ್ರೀಲಲಿತಾಚರಣದಾಸ ಶ್ರೀಮತ್ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನಾಧೀಶ್ವರ

**ಶ್ರೀ ಶ್ರೀಮತ್ ಸರ್ವಜ್ಞೇಂದ್ರ ಸರಸ್ವತೀ ಶ್ರೀ ಸ್ವಾಮಿಕರಕಮಲ ಸಂಜಾತ**

## ಶ್ರೀ ಶ್ರೀಮದ್ ಗಂಗಾಧರೇಂದ್ರ ಸರಸ್ವತೀ ಶ್ರೀ ಸ್ವಾಮಿಭಿಃ ಅಸ್ಮಾಕಂ



ಶ್ರೀ ಭಗವದ್ಗೀತಾ ಅಭಿಯಾನದ ಉದ್ಘಾಟನಾ ಸಮಾರಂಭದಲ್ಲಿ **'ಆಸ್ತಿಕಪರ್ವ'** ಎಂಬ ಗ್ರಂಥವು ಬಿಡುಗಡೆಯಾಗುತ್ತಿರುವುದು ಸಂತೋಷದ ಸಂಗತಿ. ಮಹಾಮಹೋಪಾಧ್ಯಾಯ ವಿದ್ವಾನ್ ರಂಗನಾಥ ಶರ್ಮಾರವರು ಆಧುನಿಕ ಜಗತ್ತಿನಲ್ಲಿ ಆಸ್ತಿಕರ ಮನೋಬಲವನ್ನು ಹೆಚ್ಚಿಸುವಂತಹ ದೊಡ್ಡ ಪ್ರಯತ್ನವನ್ನು ಈ ಗ್ರಂಥದ ಮೂಲಕ ಮಾಡುತ್ತಿದ್ದಾರೆ. ಈ ಹೊತ್ತು ಸಮಾಜದಲ್ಲಿ ನೈತಿಕತೆಯ ಪತನವನ್ನು ನಾವು ವಿಪುಲವಾಗಿ ಕಾಣುತ್ತಿದ್ದೇವೆ. ಮೋಸ ಮಾಡುವುದು, ಸುಳ್ಳು ಹೇಳುವುದು ಸರ್ವೇ ಸಾಮಾನ್ಯ ಎಂಬಂತೆ ಆಗಿಬಿಟ್ಟಿವೆ. ಕೊಟ್ಟ

ಮಾತಿನಂತೆ ನಡೆದುಕೊಳ್ಳುವದು ಹಾಗಿರಲಿ, ನಡೆದುಕೊಳ್ಳುವ ಪ್ರಯತ್ನವನ್ನು ಕೂಡ ಮಾಡುವಂತಹ ಪರಿಸ್ಥಿತಿಯಲ್ಲಿ ಇವತ್ತು ಸಮಾಜದ ಅನೇಕರು ಇಲ್ಲ. ಈ ರೀತಿಯಲ್ಲಿ ಮೋಸ ಮಾಡಿದ್ದರಿಂದ, ಸುಳ್ಳು ಹೇಳಿದ್ದರಿಂದ, ತನಗೆ ಯಾವುದೋ ನಷ್ಟವಾಗುತ್ತದೆಂಬ ಭಾವನೆ, ಕಲ್ಪನೆಯೂ ಇಲ್ಲ. ತಪ್ಪು ಮಾಡಿದ್ದೇನೆ; ಈ ತಪ್ಪು ಮಾಡಿದ್ದು ಸರಿಯಲ್ಲ ಎಂಬ ಒಂದು ಸಂಕೋಚದ ಭಾವನೆಯೂ ಕೂಡ ಇಲ್ಲ. ಈ ಪರಿಸ್ಥಿತಿ ದಿನದಿಂದ ದಿನಕ್ಕೆ ಹೆಚ್ಚುತ್ತಲೇ ಹೋಗುತ್ತಾ ಇದೆ. ಪರಿಣಾಮವಾಗಿ ಸಮಾಜದಲ್ಲಿ ಅನೇಕ ಸಮಸ್ಯೆಗಳು - ಅಶಾಂತಿ, ಅಸುಖಗಳು ಬೆಳೆಯುತ್ತಾ ಇವೆ. ಇದಕ್ಕೆ ಕಾರಣಗಳೇನು? ನೈತಿಕತೆಯ ಪತನಕ್ಕೆ ಕಾರಣ ಏನು? ಧರ್ಮದಲ್ಲಿ ನಂಬಿಕೆಯಿರದಿರುವಿಕೆಯೇ ಕಾರಣ. ಧರ್ಮ ಎಂದರೆ ಈ ಪ್ರಪಂಚವನ್ನೆಲ್ಲ ವ್ಯವಸ್ಥಿತವಾಗಿ ನಡೆಸಿಕೊಂಡು ಹೋಗುವಂತಹ ನಿಯಮಗಳ ಒಂದು ಸಮೂಹ. ನಾವು ಇಲ್ಲಿ ಮಾಡಿದಂತಹ ಒಳ್ಳೆಯ - ಕೆಟ್ಟ ಕೆಲಸಗಳಿಗೆ ಮುಂದೆ ಸುಖದುಃಖಗಳ ಫಲವನ್ನು ಅನುಭವಿಸಲಿಕ್ಕಿದ್ದೇವೆ ಎಂಬ ಕರ್ಮಸಿದ್ಧಾಂತ ಧರ್ಮದ ನಂಬಿಕೆಯಲ್ಲಿ ಬಹಳ ಮುಖ್ಯವಾದದ್ದು. ಶರೀರಕ್ಕಿಂತ ಬೇರೆಯಾಗಿ ''ನಾನು'' ಇದ್ದೇನೆ. ಈ ಶರೀರ ಬಿದ್ದು ಹೋದ ನಂತರವೂ ಮತ್ತೆ ಬೇರೆ ಶರೀರವನ್ನು ಸ್ವೀಕರಿಸಿಕೊಂಡು ಬಂದು ಸುಖದುಃಖಗಳನ್ನು ಅನುಭವಿಸಲಿಕ್ಕಿದ್ದೇನೆ ಎಂಬ ಪುನರ್ಜನ್ಮ ಸಿದ್ಧಾಂತ ಕರ್ಮಸಿದ್ಧಾಂತಕ್ಕೆ ಬಲವಾಗಿ ನಿಲ್ಲುತ್ತದೆ. ಅಲ್ಲದೇ ಈ ಆಸ್ತಿಕ್ಯಕ್ಕೆ, ಧರ್ಮದಲ್ಲಿ ನಂಬಿಕೆಗೆ, ದೇವರಲ್ಲಿ ಆಸ್ತಿಕ್ಯ, ದೇವರಲ್ಲಿ ನಂಬಿಕೆ ಹಿಂಬಲವಾಗಿ ನಿಲ್ಲುತ್ತದೆ. ತಾನು ಮಾಡಿದ ಕೆಲಸಗಳಿಗೆ - ಕರ್ಮಗಳಿಗೆ ದೇವರು ಫಲವನ್ನು ಕೊಡುತ್ತಾನೆ. ಈಶ್ವರ ಫಲವನ್ನು ಕೊಡುತ್ತಾನೆ. ಆದ್ದರಿಂದ ಆ ಒಡೆಯನಾದ ದೇವರು ಇದ್ದಾನೆ ಎಂಬ ಒಂದು ನಿಷ್ಠೆಯ ಭಾವನೆ ಇರಬೇಕು. ಹೀಗೆ ನೈತಿಕತೆಯ ಪತನಕ್ಕೆ ಧರ್ಮದಲ್ಲಿ ನಂಬಿಕೆ ಹೋಗಿರುವುದು ಕಾರಣ. ಆ ನಂಬಿಕೆ ಹೋಗಲು ಕಾರಣ, ದೇವರ ಅಸ್ತಿತ್ವದಲ್ಲಿ ನಂಬಿಕೆ ಇಲ್ಲದಿರುವುದೇ ಆಗಿದೆ.

ಇವತ್ತು ಎಲ್ಲ ಕಾನೂನುಗಳನ್ನು ನಾವು ತಂದುಕೊಂಡಿದ್ದೇವೆ. ಎಷ್ಟೊಂದು ವ್ಯಾಪಕವಾಗಿ ಶಿಕ್ಷಣ ಪ್ರಕಾರವನ್ನು ಕೊಡುತ್ತಿದ್ದೇವೆ! ಇಷ್ಟಾದರೂ ಕೂಡ ನಮ್ಮ ಯುವ ಜನಾಂಗದಲ್ಲಿ ಮುಂದಿನ ಪೀಳಿಗೆಯಲ್ಲಿ ನೈತಿಕತೆ ಬೆಳೆಯುವ ಸೂಚನೆಯನ್ನೇ ನಾವು

ಕಾಣುತ್ತಿಲ್ಲ. ಆದ್ದರಿಂದ ಈ ನೈತಿಕತೆಯ ಪುನಃ ಪ್ರತಿಷ್ಠಾಪನೆ ಕೇವಲ ಕಾನೂನು ಹಾಗೂ ಶಿಕ್ಷಣದ ಮಾತ್ರದಿಂದ ಸಾಧ್ಯವಿಲ್ಲ. ಈಗಿನ ಶಿಕ್ಷಣದಿಂದ ಸಾಧ್ಯವಿಲ್ಲ. ಅದಕ್ಕೆ ದೇವರ ಅಸ್ತಿತ್ವದಲ್ಲಿ ಹಾಗೂ ಧರ್ಮದಲ್ಲಿ ನಂಬಿಕೆ ಗಟ್ಟಿಯಾಗಿ ಮನಸ್ಸಿನಲ್ಲಿ ನಿಲ್ಲಬೇಕು. ಭಗವದ್ಗೀತೆಯ ಹದಿನಾರನೇ ಅಧ್ಯಾಯದಲ್ಲಿ ಹೇಳುತ್ತಾರೆ ಈ ನಾಸ್ತಿಕರು ಅಂದರೆ ಆಸುರೀ ಸಂಪತ್ತುಳ್ಳವರು. ಅವರು ಹೇಳುತ್ತಾರಂತೆ -

**''ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್।**

**ಅಪರಸ್ಪರಸಂಭೂತಂ ಕಿಮನ್ಯತ್ ಕಾಮಹೈತುಕಮ್ ॥''** (೧೬-೮)

ಈ ಜಗತ್ತಿಗೆ ಒಂದು ಸತ್ಯವಾದಂತಹ ತತ್ತ್ವದ ಆಧಾರ ಇಲ್ಲ. ಈ ಜಗತ್ತಿಗೆ ಈಶ್ವರನೆಂಬುವನು ಇಲ್ಲ. ಈ ಜಗತ್ತು ಯಾವುದೋ ಒಂದು ನಿಯಮಗಳಿಗೆ ಒಳಪಟ್ಟು ಸೃಷ್ಟಿಯಾದದ್ದಲ್ಲ. ಸಾಮಾನ್ಯವಾದ ಪುರುಷ - ಸ್ತ್ರೀಯರ ನಡುವಿನ ಆಕರ್ಷಣೆಯಿಂದ ಸಂತತಿ ಆಗುವಂತೆ ಈ ಜಗತ್ತೆಲ್ಲ ಹುಟ್ಟಿದೆ. ಆದ್ದರಿಂದ ಐಹಿಕವಾದ ಕಾಮನೆಯನ್ನು ತೀರಿಸಿಕೊಳ್ಳುವದರ ಹೊರತಾಗಿ, ಇನ್ನೇನೂ ಇಲ್ಲಿ ಮಾಡಬೇಕಾಗಿಲ್ಲ. ಇದು ನಾಸ್ತಿಕರ ದೃಷ್ಟಿ. ಈ ದೃಷ್ಟಿಯನ್ನು ಅವರು ಮನಸ್ಸಿನಲ್ಲಿ ಇಟ್ಟುಕೊಂಡದ್ದರಿಂದ ಜಗತ್ತಿಗೆ ಅಹಿತಕರರಾಗುತ್ತಾರೆ.

**''ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ।**

**ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥''**(೧೬-೯)

ಈ ದೃಷ್ಟಿಯಿಂದಾಗಿ ತಾವೂ ಕೂಡ ಪುರುಷಾರ್ಥದಿಂದ ಭ್ರಷ್ಟರಾಗುತ್ತಾರೆ. ಅಲ್ಲದೇ ಜಗತ್ತಿಗೆ ಸಮಾಜಕ್ಕೆ ಹಿತವಲ್ಲದ ಕೆಲಸದಲ್ಲಿ ಅವರು ತೊಡಗುತ್ತಾರೆ. ಇವತ್ತು ಇದೇ ಪರಿಸ್ಥಿತಿಯನ್ನು ನಾವು ಸಮಾಜದಲ್ಲಿ ಕಾಣುತ್ತಿದ್ದೇವೆ.

ನೈತಿಕತೆಯ ಪುನರ್‌ಪ್ರತಿಷ್ಠಾಪನೆಗೆ ಧರ್ಮದಲ್ಲಿ ಹಾಗೂ ದೇವರಲ್ಲಿ ನಂಬಿಕೆ ಅಗತ್ಯ. ನಂಬಿಕೆಯನ್ನೇನೋ ನಮ್ಮ ದೇಶದ ಮಟ್ಟಿಗೆ ಪ್ರಯತ್ನಪಟ್ಟು ತುಂಬಬೇಕಾದ ಅಗತ್ಯವಿಲ್ಲ. ಇಂದಿಗೂ ಕೂಡ ಅನೇಕ ಜನರಲ್ಲಿ ಸಹಜವಾದ ನಂಬಿಕೆ ಅನ್ನೋದು ಇದೆ. ಬಾಲ್ಯದಲ್ಲಿ ಮಕ್ಕಳನ್ನು ನೋಡಿದರೆ ಗೊತ್ತಾಗುತ್ತದೆ - ಅವರಿಗೆ ದೇವರಲ್ಲಿ ನಂಬಿಕೆ ಸುಲಭವಾಗಿ ಇದ್ದಿರುತ್ತದೆ. ಆದರೆ ಕ್ರಮೇಣ ದೊಡ್ಡವರಾದಂತೆ,

ಯುವಕರಾದಂತೆ, ಆಧುನಿಕ ವಾತಾವರಣಕ್ಕೆ, ಶಿಕ್ಷಣಕ್ಕೆ ಒಳಗಾದಂತೆ ಅವರ ಒಳಗಿನ ಈ ನಂಬಿಕೆ ಹೊರಟು ಹೋಗುತ್ತದೆ. ಇದನ್ನು ನಾವು ತಡೆಗಟ್ಟಬೇಕಾಗಿದೆ. **ನಂಬಿಕೆಯನ್ನು ಹೇರಬೇಕಾದ ಅಗತ್ಯ ಇಲ್ಲ. ನಂಬಿಕೆಯನ್ನು ಕೆಡದಂತೆ ನೋಡುವ ಕೆಲಸವನ್ನು ನಾವು ಮಾಡಬೇಕಾಗಿದೆ.** ಆ ದೃಷ್ಟಿಯಿಂದ ಶ್ರೀ ರಂಗನಾಥ ಶರ್ಮಾರವರ ಈ ಪ್ರಯತ್ನ ತುಂಬಾ ಸ್ವಾಗತಾರ್ಹವಾದದ್ದು, ಯೋಗ್ಯವಾದದ್ದು. ಸಮಾಜದಲ್ಲಿ ಆಸ್ತಿಕತೆ ಹೆಚ್ಚು ಬೆಳೆಯಲಿ, ಈ ಗ್ರಂಥ ಆಸ್ತಿಕತೆಯನ್ನು ಬೆಳೆಸುವಲ್ಲಿ ಹೆಚ್ಚು ಸಾರ್ಥಕವಾಗಲಿ ಎಂಬುದಾಗಿ ಆರಾಧ್ಯ ಶ್ರೀ ದೇವರಲ್ಲಿ ಪ್ರಾರ್ಥಿಸುತ್ತೇವೆ.

**ಲೋಕಾಃ ಸಮಸ್ತಾಃ ಸುಖಿನೋಭವಂತು**

**ನಾರಾಯಣ** **ನಾರಾಯಣ** **ನಾರಾಯಣ**

# ಪ್ರಸ್ತಾವನ

ಈಗ ನಮ್ಮ ದೇಶದಲ್ಲಿ ರೋಗ, ಬಡತನ, ಬರಗಾಲ, ಅತಿವೃಷ್ಟಿ ಮುಂತಾದ ಪಿಡುಗುಗಳಿಗಿಂತ ಸುಳ್ಳು, ಹಿಂಸೆ, ಕಳ್ಳತನ, ನೀತಿ ಭ್ರಷ್ಟತೆ, ದುರಾಚಾರಗಳೇ ಅಧಿಕವಾಗಿ ಜನರನ್ನು ಕಾಡುತ್ತಿರ್ವೆಯೆಂಬುದು ಸರ್ವರಿಗೂ ತಿಳಿದ ವಿಷಯವೇ ಆಗಿದೆ. ಸಚ್ಚಾರಿತ್ರ್ಯದ ಕೊರತೆ ಸಮಾಜದ ಸುಖ ಜೀವನವನ್ನು ಕೊರೆಯುತ್ತಿದೆ. ಈ ಅನೈತಿಕತೆಯು ಕ್ರಮೇಣ ಬೆಳೆಯುತ್ತಿರುವುದನ್ನು ಗಮನಿಸಿದಾಗ ಸರಕಾರವು ಇದನ್ನು ತಡೆಯಲು ಅಶಕ್ತವೆಂಬುದು ಸ್ಪಷ್ಟ. ''ಭಕ್ತನು ಶ್ಯಾವಿಗೆಯನ್ನು ಬೇಡಲು ಹೋದಾಗ ಹನುಮಂತರಾಯನು ಹಗ್ಗವನ್ನು ತಿನ್ನುತ್ತಿದ್ದ'' ಎಂಬ ಗಾದೆ ಇಲ್ಲಿ ಸ್ಮರಣೆಗೆ ಬಂದೀತು. ಇವೆಲ್ಲವೂ ನಾವೇ ತಂದುಕೊಂಡಿರುವ ಮಾನವ ನಿರ್ಮಿತ ವಿಪತ್ತುಗಳು.

ಹೀಗೆ ಧರ್ಮದ ಗ್ಲಾನಿ, ಅಧರ್ಮದ ಉತ್ಥಾನ ಆದಾಗ ಧರ್ಮಸಂಸ್ಥಾಪನೆಗಾಗಿ ನಾನು ಅವತರಿಸಿಬರುತ್ತೇನೆ ಎಂದು ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಹೇಳಿದ್ದಾನೆ. ಅಲ್ಲಿಯವರೆಗೆ ಪ್ರಜ್ಞಾವಂತರೂ, ಸಮಾಜದ ಹಿತೈಷಿಗಳೂ, ಸಮರ್ಥರೂ, ಧರ್ಮಜ್ಞರೂ ಆದವರು ಏನು ಮಾಡಬೇಕು? ಧರ್ಮ ರಕ್ಷಣೆಗಾಗಿಯೇ ಧರ್ಮಪೀಠಾಧ್ಯಕ್ಷರಾಗಿರುವ ಯತೀಶ್ವರರ ಕಡೆಗೆ ಪ್ರಜೆಗಳು ನೋಡುವುದು ಸಹಜವಾಗುತ್ತದೆ.

ಇದೆಲ್ಲವನ್ನೂ ಗಮನಿಸಿದ ಶ್ರೀ ಸೋಂದಾ ಸ್ವರ್ಣವಲ್ಲೀ ಮಠಾಧೀಶರಾದ **ಪರಮಪೂಜ್ಯ ಶ್ರೀ ಶ್ರೀಮದ್ ಗಂಗಾಧರೇಂದ್ರ ಸರಸ್ವತೀ ಮಹಾಸ್ವಾಮಿಗಳವರು** **'ಭಗವದ್ಗೀತಾ ಅಭಿಯಾನ'** ಎಂಬ ದೊಡ್ಡ ಕಾರ್ಯಕ್ರಮವನ್ನು ರೂಪಿಸಿ ಪ್ರಜೆಗಳ ಹಿತಕ್ಕಾಗಿ ಕಾರ್ಯ ಪ್ರವೃತ್ತರಾಗಿದ್ದಾರೆ. ಧರ್ಮರಕ್ಷಣೆಗಾಗಿ ಭಗವದ್ಗೀತಾ ಪ್ರಚಾರದ ಮೂಲಕ ಅಧರ್ಮದ ಮೇಲೆ ಮಾಡುವ ದಂಡಯಾತ್ರೆ ಇದು. ಭಗವಂತನ ಉದ್ದೇಶವನ್ನು ನೆರವೇರಿಸುವ ಆಶಯದಿಂದ ಕೈಗೊಂಡಿರುವ ಒಂದು ಭಗವತ್ಸೇವೆ ಇದು.

ಭಗವದ್ಗೀತೆಯು ಶ್ರೇಷ್ಠವಾದ ಧಾರ್ಮಿಕಗ್ರಂಥ. ಅವತಾರ ಪುರುಷನಾದ ಶ್ರೀಕೃಷ್ಣನ ದಿವ್ಯವಾಣಿಯನ್ನು ವ್ಯಾಸ ಮಹರ್ಷಿಗಳು ವಿವರಿಸಿರುವುದರಿಂದ ಸರ್ವಮಾನವರಿಗೂ ಶಿರೋಧಾರ್ಯವಾದದ್ದು. ಅತ್ಯಂತ ಸುಲಭ ಶೈಲಿಯಲ್ಲಿ ಸರ್ವೋಪನಿಷತ್ತುಗಳ ಸಾರವನ್ನು ಇದರಲ್ಲಿ ಸಂಗ್ರಹಿಸಿ ಹೇಳಿರುವುದಲ್ಲದೇ, ದೈವೀ ಸಂಪತ್ತಿಗೆ ಸೇರಿದ ಸಾಮಾನ್ಯ ನೀತಿಗಳನ್ನೂ ತಿಳಿಸಿಕೊಟ್ಟಿರುವುದು ಇದರ

ವೈಶಿಷ್ಟ್ಯವಾಗಿದೆ. ಕಾವ್ಯದಂತೆ ಮನೋಹರವಾದ ಶೈಲಿಯನ್ನಿಲ್ಲಿ ಬಳಸಲಾಗಿದೆ. ವಿಶ್ವರೂಪದರ್ಶನಾಧ್ಯಾಯವನ್ನು ಒಂದು ಕಾವ್ಯವೆಂದೇ ಹೇಳಬಹುದು. ಸಾರ್ವಜನಿಕರಿಗೆ ಆಸಕ್ತಿಯನ್ನುಂಟು ಮಾಡತಕ್ಕದ್ದೂ, ಬೋಧಪ್ರದವೂ ಆದ ಈ ಗ್ರಂಥವನ್ನು 'ಅಭಿಯಾನ' ಕ್ಕಾಗಿ ಆರಿಸಿಕೊಂಡಿರುವುದು ಸಮುಚಿತವಾಗಿದೆ.

ಭಗವದ್ಗೀತೆಯ ಉಪದೇಶವು ಆಸ್ತಿಕ್ಯದ ತಳಹದಿಯ ಮೇಲೆ ನಿಂತಿದೆ. ಸೃಷ್ಟಿಕರ್ತನಾದ ಈಶ್ವರನು (ದೇವರು) ಇದ್ದಾನೆ; ವಿಶ್ವವೆಲ್ಲವೂ ಆತನಿಗೆ ಅಧೀನವಾಗಿದ್ದು, ಆತನ ನಿಯಂತ್ರಣಕ್ಕೆ ಒಳಪಟ್ಟಿದೆ. ದೇಹಾತಿರಿಕ್ತನಾದ ಜೀವಾತ್ಮನಿದ್ದಾನೆ, ಜನ್ಮಾಂತರವಿದೆ. ಪಾಪಪುಣ್ಯಗಳ ಫಲವನ್ನು ಜನ್ಮಾಂತರದಲ್ಲಾದರೂ ಅನುಭವಿಸಲೇಬೇಕು. ಆದ್ದರಿಂದ ಧರ್ಮಮಾರ್ಗದಲ್ಲಿಯೇ ನಡೆಯುವುದು ಶ್ರೇಯಸ್ಕರ ಎಂಬ ನಂಬಿಕೆಯೇ ಆಸ್ತಿಕ್ಯ. ಈ ಆಸ್ತಿಕ್ಯ ಬುದ್ಧಿ ಇಲ್ಲದ ನಾಸ್ತಿಕರಿಗೆ ಭಗವದ್ಗೀತೆಯಿಂದ ಪ್ರಯೋಜನವಾಗದು.

ಭಾರತೀಯರು ಸಹಜವಾಗಿ ಆಸ್ತಿಕ ಬುದ್ಧಿಯವರು. ಸಾಮಾನ್ಯ ಪ್ರಜಾಜನರಲ್ಲಿ ಈಗಲೂ ದೇವರಿದ್ದಾನೆಂಬ ಬುದ್ಧಿಯೂ, ಪಾಪ ಭೀತಿಯೂ ನೆಲೆಸಿದೆ. ಆಧುನಿಕ ಯುವ ಪೀಳಿಗೆಯಲ್ಲಿ ಇದು ಸಡಿಲವಾಗುತ್ತಿದೆ. ಅದರಲ್ಲಿಯೂ ನಮಗೆ ರಾಜಕೀಯ ಸ್ವಾತಂತ್ರ್ಯವು ಬಂದಮೇಲೆ ಬುದ್ಧಿಯು ಪರಾಧೀನವಾಗಿ ನಡತೆಯು ಅತಂತ್ರವಾಯಿತು. ಇದಕ್ಕೆ ಹಲವಾರು ಕಾರಣಗಳಿವೆ. ಮನೆಗಳಲ್ಲಿ ಧಾರ್ಮಿಕ ಪರಿಸರ ಕಡಿಮೆಯಾಯಿತು. ಶಾಲೆಗಳಲ್ಲಿ ದೇವರ ಪ್ರಾರ್ಥನೆ, ನೀತಿಬೋಧೆ ದೂರವಾದವು. ವಿಜ್ಞಾನ ಶಿಕ್ಷಣವು ಅಜ್ಞರ 'ಹೇತುವಾದ'ವನ್ನು ಪುಷ್ಟೀಕರಿಸಿತು. ಕೇವಲ ಸ್ವಾರ್ಥ ರಾಜಕಾರಣವು ಸರ್ಕಾರದವರೆಗೂ ವ್ಯಾಪಿಸಿ ಎಲ್ಲ ಶಿಷ್ಟಾಚಾರಗಳನ್ನೂ ನುಂಗಿಬಿಟ್ಟಿತು.

ನಮ್ಮ ಯಾವ ನಡತೆಯು ಸಜ್ಜನರಿಗೆ ಸಂತೋಷವನ್ನು, ಹಿತವನ್ನು ಉಂಟುಮಾಡುವುದೋ ಅದೇ ಸನ್ಮಾರ್ಗ. ಋಜುಮಾರ್ಗ. ಅದೇ ಸೌಜನ್ಯ. ಸತ್ಯ, ಅಹಿಂಸೆ ಮುಂತಾದ ಸದ್ಗುಣಗಳಿಗೆ ಪಾಪಭೀರುತೆ ಮೂಲ. ಪಾಪಭೀರುತೆಗೆ ಆಸ್ತಿಕ್ಯ ಬುದ್ಧಿಯು ಮೂಲ.

ಏನನ್ನೂ ಅರಿಯದ ಅಜ್ಞರು ಆಸ್ತಿಕರಾಗಿರುತ್ತಾರೆ. ವಿದ್ವಾಂಸರಾದ ಪ್ರಾಜ್ಞರೂ ಆಸ್ತಿಕರು. ಅಲ್ಪಜ್ಞರು ಮಾತ್ರ ನಾಸ್ತಿಕರಾಗಿರುವುದು ಕಂಡುಬರುತ್ತದೆ. ಇವರಿಗೆ ದೇವರಲ್ಲಿ ನಂಬಿಕೆ ಇಲ್ಲದಿದ್ದರೆ, ತಮ್ಮ ಪಾಡಿಗೆ ಇದ್ದುಕೊಂಡಿರಲಿ. ನಂಬಿಕೆಯನ್ನು ಹುಟ್ಟಿಸಲು ಯಾರೂ ಒತ್ತಾಯ ಮಾಡುವುದಿಲ್ಲ. ಆದರೆ ಇವರು ಪುಸ್ತಕಗಳನ್ನು ಬರೆದು ನಾಸ್ತಿಕ್ಯ ಬುದ್ಧಿಯನ್ನು ಜನರಲ್ಲಿ ಹಂಚುವುದು ಯಾವ ಉದ್ದೇಶದಿಂದ? ತಾವು ವಿಚಾರಶೀಲರೆಂದೂ, ಬುದ್ಧಿವಂತರೆಂದೂ ಪ್ರಚಾರ ಮಾಡುವುದಕ್ಕಿರಬಹುದೇ? ಇವರು

ಜನರಿಗೆ ಅಹಿತಕಾರಿಗಳೇ ಹೊರತು ಹಿತಕಾರಿಗಳಲ್ಲ.

ಈ ಪುಸ್ತಕವನ್ನೋದಿದ ನಾಸ್ತಿಕರು ಆಸ್ತಿಕರಾಗಿ ಬಿಡುತ್ತಾರೆಂಬ ಭ್ರಮೆ ನನಗಿಲ್ಲ. ಆದರೆ ಪ್ರಚಾರಕ್ಕೆ ಮರುಳಾಗತಕ್ಕವರನ್ನು ಅಲ್ಪಪ್ರಮಾಣದಲ್ಲಾದರೂ ತಡೆದೀತು. ಅವರ ಸಂದೇಹಗಳಲ್ಲಿ ಕೆಲವಕ್ಕಾದರೂ ಉತ್ತರ ದೊರಕೀತು - ಎಂದು ನಾನು ಭಾವಿಸಿದ್ದೇನೆ. ಪುಸ್ತಕವು ವಿಸ್ತೃತವಾದೀತೆಂಬ ಕಾರಣದಿಂದ ಆಧುನಿಕ ಶ್ರೇಷ್ಠ ವಿಜ್ಞಾನಿಗಳ ಅಭಿಪ್ರಾಯಗಳನ್ನೂ, ತೀರ್ಪುಗಳನ್ನೂ ಇಲ್ಲಿ ಉಲ್ಲೇಖಿಸಿಲ್ಲ. ಕುತೂಹಲಿಗಳು Maya in Physics by Dr. N. C. Ponda ಎಂಬ ವೈಜ್ಞಾನಿಕ ಗ್ರಂಥವನ್ನು ಓದಬಹುದು.

## ಕೃತಜ್ಞತಾ ಸಮರ್ಪಣೆ

ಭಗವದ್ಗೀತಾ ಅಭಿಯಾನಕ್ಕೆ ಇಂತಹ ಒಂದು ಪ್ರಬಂಧವಿದ್ದರೆ ಸಹಾಯವಾದೀತು ಎಂದು ಆಲೋಚಿಸಿ, ಪರಮಪೂಜ್ಯರಾದ ಶ್ರೀ ಶ್ರೀಮದ್ ಗಂಗಾಧರೇಂದ್ರ ಸರಸ್ವತೀ ಮಹಾಸ್ವಾಮಿಗಳು ಇದನ್ನು ಬರೆದುಕೊಡಬೇಕೆಂದು ನನಗೆ ಆಜ್ಞಾಪಿಸಿದರು. ಅನಾರೋಗ್ಯದಿಂದ ಬಳಲುತ್ತಿದ್ದ ನಾನು ಅವರ ಆಜ್ಞೆಯನ್ನು ಮೀರಲಾರದೇ ಇದನ್ನು ರಚಿಸಲು ಒಪ್ಪಿಕೊಂಡೆನು. ಅವರ ಅನುಗ್ರಹದಿಂದಲೇ ಈ ಪುಸ್ತಕವು ಸಿದ್ಧವಾಯಿತೆಂದು ನಂಬಿದ್ದೇನೆ. ಹೀಗೆ ನನ್ನಲ್ಲಿ ವಿಶ್ವಾಸವನ್ನಿಟ್ಟು ಪ್ರೋತ್ಸಾಹಿಸಿದ ಪೂಜ್ಯ ಶ್ರೀ ಶ್ರೀಗಳವರಿಗೆ ಕೃತಜ್ಞತಾಪೂರ್ವಕವಾಗಿ ಸಾಷ್ಟಾಂಗ ನಮಸ್ಕಾರಗಳನ್ನು ಅರ್ಪಿಸುತ್ತೇನೆ.

ಕುತ್ತಿಗೆಯ ನೋವಿನಿಂದ ನಾನು ಬಹಳ ಹೊತ್ತು ಮಲಗಿರಬೇಕಾಗುತ್ತಿತ್ತು. ಆದ್ದರಿಂದ ಬರೆಯಲು ನೆರವಾಗಬೇಕೆಂದು ನನ್ನ ಮಾನ್ಯಮಿತ್ರರಾದ ವೇ|| ವಿದ್ವಾನ್ ಯ. ಕೃಷ್ಣಶರ್ಮರ ಸಹಾಯವನ್ನು ಯಾಚಿಸಿದೆ. ಮರು ಮಾತಿಲ್ಲದೆ ಅವರು ಒಪ್ಪಿಕೊಂಡು ಬಂದರು. ನಾನು ಹಾಸಿಗೆಯಲ್ಲಿ ಮಲಗಿಯೇ ಹೇಳುತ್ತಿದ್ದುದನ್ನು ಅವರು ಲೇಖಿಸುತ್ತಿದ್ದರು. ಅವರ ಸಹಾಯದಿಂದಲೇ ಇದು ಪೂರ್ಣವಾಯಿತು. ವೇ. ವಿದ್ವಾನ್ ಯ. ಕೃಷ್ಣಶರ್ಮರಿಂದಾದ ಉಪಕಾರವನ್ನು ನಾನು ಸದಾ ಸ್ಮರಿಸಿಕೊಳ್ಳುತ್ತೇನೆ.

ಗಿರಿನಗರದ ''ಅಕ್ಷರಂ''ನಲ್ಲಿ ವಾಸವಾಗಿರುವ ಚಿ. ಉದಯ ನ. ಹೆಗಡೆ ಎಂಬ ವಿದ್ಯಾರ್ಥಿಯು ಈ ಪುಸ್ತಕವನ್ನು ಮುದ್ರಣಕ್ಕೆ ಅನುಕೂಲವಾಗುವಂತೆ ಡಿ. ಟಿ. ಪಿ. ಮಾಡಿಕೊಟ್ಟಿದ್ದಾನೆ. ಭಗವಂತನು ಈತನಿಗೆ ದೀರ್ಘಾಯುರಾರೋಗ್ಯಾದಿ ಸಂಪದಗಳನ್ನಿತ್ತು ಕಾಪಾಡಲೆಂದು ಆ ಸರ್ವಶಕ್ತನನ್ನು ಪ್ರಾರ್ಥಿಸಿಕೊಳ್ಳುತ್ತೇನೆ.

ಇತಿ ಸಜ್ಜನವಿಧೇಯ,

**ಬೆಂಗಳೂರು**

ತಾ.: ೨೨-೦೯-೨೦೦೭

**ವಿದ್ವಾನ್ ಎನ್. ರಂಗನಾಥ ಶರ್ಮಾ**

# ಪ್ರಕಾಶಕರ ನುಡಿ

**ಶ್ರೀ ಶ್ರೀಮದ್ ಜಗದ್ಗುರು ಶಂಕರಾಚಾರ್ಯ ಶ್ರೀ ಶ್ರೀಮದ್ ಗಂಗಾಧರೇಂದ್ರ ಸರಸ್ವತೀ ಮಹಾ ಸ್ವಾಮಿಗಳು ಸ್ವರ್ಣವಲ್ಲೀ ಮಹಾಸಂಸ್ಥಾನ**ದ ಪೀಠ ಪರಂಪರೆಯ ೫೪ನೇ ಯತಿವರೇಣ್ಯರು. ತಮ್ಮ ಪೀಠಾರೋಹಣದ ನಂತರದ ಈ ೧೭ ವರ್ಷಗಳಲ್ಲಿ ಭಾರತದ ಉದ್ದಗಲಕ್ಕೂ ಅನೇಕ ಸಾರೆ 'ಧರ್ಮದಂಡಯಾತ್ರೆ'ಯನ್ನು ಕೈಗೊಂಡಿದ್ದಾರೆ. ಈ ಅವಧಿಯಲ್ಲಿ ಅವರು ಮಾಡಿದ ಎಲ್ಲ ಉಪನ್ಯಾಸಗಳೂ ಬೇರೆ - ಬೇರೆ ವಿಷಯಗಳಿಗೆ ಸಂಬಂಧಿಸಿದ್ದರೂ, ಧರ್ಮದ ಸುಳಿಯಲ್ಲಿ ಸುತ್ತಿಯೇ ಹೊರಬಂದವುಗಳಾಗಿವೆ. ಪೂಜ್ಯ ಶ್ರೀಗಳು ಶಾಲ್ಮಲಾ ತೀರವಾಸಿ. ಅದಕ್ಕೇ ಹೋದಲ್ಲೆಲ್ಲ ಜನತೆಗೆ ಶಾಲ್ಮಲೆಯ ನಿರ್ಮಲ ಜ್ಞಾನಗಂಗೆಯನ್ನೆರೆಯುತ್ತಾರೆ.

ಪೂಜ್ಯ ಶ್ರೀಗಳ ವಿಚಾರ ಧಾರೆಯನ್ನು ನಾವು ಎರಡು ವಿಭಾಗದಲ್ಲಿ ಕಾಣಬಹುದು. ೧) ವೇದ, ಉಪನಿಷತ್ತು, ಅಧ್ಯಾತ್ಮ ವಿದ್ಯೆ, ಭಾಗವತ, ಭಾರತ, ರಾಮಾಯಣದಂತಹ ಪುರಾಣಗಳಿಗೆ ಸಂಬಂಧಿಸಿದ್ದು, ೨) ಸಮಾಜದ ಸರ್ವತೋಮುಖ ಏಳಿಗೆಗೆ ಸಂಬಂಧಿಸಿದ್ದು. ಸಂನ್ಯಾಸಿಗಳಾದರೂ ಪೀಠಾಧಿಪತ್ಯದ ಕರ್ತವ್ಯಪ್ರಜ್ಞೆಯನ್ನು ಸದಾ ಅರಿವಿನಲ್ಲಿ ಇಟ್ಟುಕೊಂಡು ಧರ್ಮದ ನೆಲಗಟ್ಟಿನ ಮೇಲೆ ಇಡೀ ಸಮಾಜದ ಉನ್ನತಿ ಅಂದರೆ - ಸಮಾಜವೇ ಆಗಲಿ, ಸರಕಾರವೇ ಆಗಲಿ ನ್ಯಾಯಮಾರ್ಗದಿಂದ ವಿಚಲಿತವಾಗಬಾರದೆಂಬ ಆಶಯವುಳ್ಳವರು. ಈ ಹಿನ್ನೆಲೆಯಲ್ಲಿಯೇ ಬೇಡ್ತಿ - ಕೈಗಾದಂತಹ, ಸಮಾಜದ ಪರಂಪರೆ ಮತ್ತು ಸಂಸ್ಕೃತಿಗಳ ಮೇಲೆ ಆಘಾತವನ್ನು ಉಂಟುಮಾಡುವ ಯೋಜನೆಗಳನ್ನು ವಿರೋಧಿಸಿದರು. ಇಷ್ಟೇ ಅಲ್ಲ ಬೇಡ್ತೀ ಯೋಜನೆಯ ವಿರೋಧಿ ಆಂದೋಲನದಲ್ಲಿ ಆ ಭಾಗದ ಆಬಾಲ - ವೃದ್ಧರೆಲ್ಲರನ್ನೂ ಜಾಗೃತಗೊಳಿಸಿ ಆಂದೋಲನದ ಯಶಸ್ಸಿಗೆ ಕಾರಣರಾದರು ಹಾಗೂ ಭಾರತದ ತುಂಬ ಹಸಿರುಸ್ವಾಮಿಗಳೆಂದೇ ಖ್ಯಾತರಾದರು. ಸಂವಿಧಾನದಲ್ಲಿ ''ಧರ್ಮ'' ಶಬ್ದದ ಸೇರ್ಪಡೆಯಾಗಬೇಕೆಂಬ ಬಗ್ಗೆ ಎರಡು ರಾಷ್ಟ್ರೀಯ ವಿಚಾರ ಸಂಕಿರಣಗಳನ್ನು ಆಯೋಜಿಸಿದರು.

ಉತ್ತರ ಕರ್ನಾಟಕದ ಜನ ಹಿಂದೂ ಸಂಸ್ಕೃತಿಯನ್ನು ಮರೆತು ಅನ್ಯ ಧರ್ಮಕ್ಕೆ ಗುಳೆಹೋಗುತ್ತಿದ್ದುದನ್ನು ತಿಳಿದು ಪೂಜ್ಯ ಶ್ರೀ ಶ್ರೀಗಳು ಅಲ್ಲಿ ಕಳಾಹೀನವಾಗಿ ತೋರುತ್ತಿರುವ ಹಿಂದೂ ಧರ್ಮದೇವತೆಯ ಪ್ರಖರತೆಯನ್ನು ಮತ್ತೊಮ್ಮೆ ಜನತೆಗೆ ಮನದಟ್ಟು ಮಾಡಿ ತೋರಿಸಬೇಕೆಂಬ ಮಹಾತ್ವಾಕಾಂಕ್ಷೆಯನ್ನು ಹೊಂದಿದ್ದಾರೆ. ಗೀತಾಚಾರ್ಯ ಶ್ರೀಕೃಷ್ಣನು ಎಂದೋ ಉಚ್ಛರಿಸಿದ-

**''ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹ॥''**

**''ಕ್ಷುದ್ರಂ ಹೃದಯ ದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ''**

ಎಂಬ ಘೋಷವನ್ನು ಮಾರ್ದನಿಗೊಳಿಸಬೇಕೆಂದಿದ್ದಾರೆ.

ಸುಮಾರು ೪-೫ ತಿಂಗಳುಗಳ ಹಿಂದೆ ಪೂಜ್ಯ ಶ್ರೀಗಳ ಸವಾರಿ ಬೆಂಗಳೂರಲ್ಲಿ ಇತ್ತು. ಆಗ ವಿ॥ ರಂಗನಾಥ ಶರ್ಮಾರವರಲ್ಲಿ ''ದೇವರು ಇದ್ದಾನೆ ಎಂದು ಸಿದ್ಧಮಾಡುವ ರೀತಿಯಲ್ಲಿ ಒಂದು ಕಿರು ಹೊತ್ತಿಗೆ ಅಥವಾ ದೀರ್ಘ ಲೇಖನವನ್ನು ಬರೆಯಬೇಕಿತ್ತು'' ಎಂಬ ಸೂಚನೆಯನ್ನು ಮುಂದಿಟ್ಟರು. ಇದರ ಫಲವಾಗಿ ಹೊರಹೊಮ್ಮಿದ್ದು ''ಆಸ್ತಿಕಪರ್ವ''. ವಿದ್ವಾನ್ ರಂಗನಾಥ ಶರ್ಮಾರವರ ''ಆಸ್ತಿಕಪರ್ವ'' ವೆಂಬ ಈ ಹೊತ್ತಿಗೆಯು ಮಾರ್ಮಿಕವಾಗಿ ಮತ್ತು ತಾರ್ಕಿಕವಾಗಿ ಮೂಡಿಬಂದಿದೆ. ಇದು ಭಗವದ್ಗೀತೆ ಅಭಿಯಾನದ ಒಂದು ಅಂಗ ಎಂದಾದರೆ ತಪ್ಪಾಗಲಿಕ್ಕಿಲ್ಲ. ಜ್ಞಾನವೃದ್ಧರೂ, ವಯೋವೃದ್ಧರೂ ಮತ್ತು ಅನುಭವದ ಪರಿಪಕ್ವತೆಯನ್ನು ಹೊಂದಿದ ವಿ॥ ರಂಗನಾಥ ಶರ್ಮಾರವರಿಗೆ ಶ್ರೀ ಭಗವತ್ಪಾದ ಪ್ರಕಾಶನದ ಪರವಾಗಿ ತುಂಬು ಹೃದಯದ ಅಭಿನಂದನೆಗಳನ್ನು ಸಲ್ಲಿಸುತ್ತೇವೆ.

ಅಮೂಲ್ಯವಾದ ಸೂಚನೆಯನ್ನು ನೀಡಿ ಈ ಗ್ರಂಥಕೃತಿಗೆ ಪ್ರೇರಕರಾದ ಹಾಗೂ ಅಭಿಯಾನಕ್ಕೆ ಕಾರಣೀಕರ್ತರೂ ಆಗಿರುವ ಪೂಜ್ಯ ಶ್ರೀ ಶ್ರೀ ಗಂಗಾಧರೇಂದ್ರ ಸರಸ್ವತೀ ಮಹಾಸ್ವಾಮಿಗಳ ಪಾದಾರವಿಂದಗಳಿಗೆ ಕರ್ನಾಟಕ ಭಕ್ತ ಕೋಟಿಯ ಪರವಾಗಿ ಕೃತಜ್ಞತೆಯ ಪುಷ್ಪಗಳನ್ನು ಅರ್ಪಿಸುತ್ತಿದ್ದೇವೆ. ಈ ಗ್ರಂಥದ ತಯಾರಿಯಲ್ಲಿ ಸಹಕರಿಸಿದ ನಮ್ಮ 'ಸ್ವರ್ಣವಲ್ಲೀಪ್ರಭಾ' ಮಾಸಪತ್ರಿಕೆ ಸಂಪಾದಕ ಶ್ರೀ ನಾ. ಸು.ಭರತನಹಳ್ಳಿಯವರಿಗೆ ಕೃತಜ್ಞತೆಗಳು.

ಗ್ರಂಥವನ್ನು ಅಂದವಾಗಿ ಮುದ್ರಿಸಿಕೊಟ್ಟ ಚೇತನಾ ಸಹಕಾರಿ ಆಫ್‌ಸೆಟ್ ಮುದ್ರಣಾಲಯದ ಮುಖ್ಯಕಾರ್ಯನಿರ್ವಾಹಕ ಶ್ರೀ ಪಿ. ವಿ. ಹೆಗಡೆ, ಕಂಪ್ಲಿ ಹಾಗೂ ಅವರ ಸಿಬ್ಬಂದಿಯವರಿಗೂ ಧನ್ಯವಾದಗಳು.

ಈ ಮಹಾನ್ ಅಭಿಯಾನದ ಸಂದರ್ಭದಲ್ಲಿ ಕರ್ನಾಟಕದ ಮಹಾಜನತೆ ಈ ಗ್ರಂಥವನ್ನು ಕೊಂಡು ಓದಿದಾಗ ಬಹುಸಂಖ್ಯಾತ ಜನರ ಮನಸ್ಸು **ಆಸ್ತಿಕ್ಯಭಾವದ ಕಡೆಗೆ ವಾಲಿದರೆ** ಲೇಖಕರ, ಪ್ರಕಾಶಕರ, ಇದೆಲ್ಲಕ್ಕೂ ಹೆಚ್ಚಾಗಿ ಶ್ರೀ ಶ್ರೀಗಳ ಅಪೇಕ್ಷೆ ಸಾರ್ಥಕವಾದೀತು ಮತ್ತು ಅಭಿಯಾನದ ಈ ಮಹಾಯಾನ ತನ್ನ ಗುರಿ ಮುಟ್ಟೀತು.

**ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನ ,**
**ಸೋಂದಾ**
೧೫-೧೦-೨೦೦೭

**ಡಾ. ಜಿ. ಎಂ. ಹೆಗಡೆ, ಧಾರವಾಡ**
**ಪ್ರಾ. ಪಿ. ಆಯ್. ಹೆಗಡೆ, ಶಿರಸಿ**

# ಆಸ್ತಿಕಪರ್ವ

-೧-

**"ಯಸ್ಮಾಜ್ಜಾತಂ ಜಗತ್ಸರ್ವಂ ಯಸ್ಮಿನ್ನೇವ ಪ್ರಲೀಯತೇ ।**

**ಯೇನೇದಂ ಧಾರ್ಯತೇ ಚೈವ ತಸ್ಮೈ ಜ್ಞಾನಾತ್ಮನೇ ನಮಃ ॥"**

ಭಾರತವರ್ಷವೆಂದು ವಿಖ್ಯಾತವಾದ ನಮ್ಮ ಈ ರಾಷ್ಟ್ರವು ಜ್ಞಾನಭಂಡಾರವೆನಿಸಿದ ಪವಿತ್ರವೇದಗಳು ಆವಿರ್ಭವಿಸಿದ ಪುಣ್ಯಭೂಮಿ. ವೇದದ್ರಷ್ಟಾರರಾದ ವಾಮದೇವ - ವಸಿಷ್ಠ - ವಿಶ್ವಾಮಿತ್ರಾದಿ ಋಷಿಗಳ ತಪೋಭೂಮಿ. ಧರ್ಮ ರಕ್ಷಣೆಗಾಗಿ ಅವತರಿಸಿದ ಶ್ರೀರಾಮ, ಶ್ರೀಕೃಷ್ಣಾದಿ ಮಹಾಪುರುಷರ ಲೀಲಾಭೂಮಿ. ಶ್ರೀಮದ್ರಾಮಾಯಣ ಮಹಾಭಾರತಾದಿ ಕಾವ್ಯಗಳನ್ನು ರಚಿಸಿದ ವಾಲ್ಮೀಕಿ, ವ್ಯಾಸಾದಿ ರಸಋಷಿಗಳ ಜನ್ಮಭೂಮಿ. ಶುಕ, ಪತಂಜಲಿ ಮೊದಲಾದ ಯೋಗಿಗಳ ಯೋಗಭೂಮಿ. ಕಪಿಲ, ಕಣಾದಾದಿ ದಾರ್ಶನಿಕರ ತತ್ತ್ವದರ್ಶನಭೂಮಿ. ಆರ್ಯಭಟ ಸುಶ್ರುತಾದಿ ವಿಜ್ಞಾನಿಗಳ ಪ್ರಯೋಗಭೂಮಿ. ಮನು, ಯಾಜ್ಞವಲ್ಕ್ಯಾದಿ ಧರ್ಮಸ್ವರೂಪವೇದಿಗಳ ಧರ್ಮಭೂಮಿ. ಅಭಿನವಗುಪ್ತ ವಾಚಸ್ಪತಿಮಿಶ್ರ ಮೊದಲಾದ ವಿದ್ವಾಂಸರ ವಿದ್ಯಾಭೂಮಿ. ಪೃಥ್ವೀರಾಜ, ಪ್ರತಾಪಸಿಂಹ, ಶಿವಾಜಿ, ಶ್ರೀ ವಿದ್ಯಾರಣ್ಯಾದಿ ರಾಷ್ಟ್ರಭಕ್ತರ ಕರ್ಮಭೂಮಿ. ವಿಷ್ಣುಪುರಾಣದಲ್ಲಿ ಈ ಭಾರತ ದೇಶವನ್ನು ವರ್ಣಿಸುವಾಗ ಈ ಶ್ಲೋಕ ಬಂದಿದೆ -

**"ಗಾಯಂತಿ ದೇವಾಃ ಕಿಲ ಗೀತಕಾನಿ**

**ಧನ್ಯಾಸ್ತು ತೇ ಭಾರತಭೂಮಿಭಾಗೇ ।**

**ಸ್ವರ್ಗಾಪವರ್ಗಾಸ್ಪದಮಾರ್ಗಭೂತೇ**

**ಭವಂತಿ ಭೂಯಃ ಪುರುಷಾಃ ಸುರತ್ವಾತ್ ॥"** (೨-೩-೨೪)

**ತಾತ್ಪರ್ಯ :** ದೇವತೆಗಳು ಈ ಪ್ರಕಾರವಾಗಿ ಗೀತೆಗಳನ್ನು ರಚಿಸಿ ಹಾಡಿಕೊಳ್ಳುತ್ತಾರೆ - ''ಈ ಭಾರತ ಭೂಮಿಯಲ್ಲಿ ಜನಿಸಿದವರು ಧನ್ಯರು. ಈ ದೇಶವು ಸ್ವರ್ಗ ಮತ್ತು ಮೋಕ್ಷಗಳನ್ನು ಪಡೆಯಲು ಮಾರ್ಗವನ್ನು ತೋರಿಸಿಕೊಟ್ಟಿದೆ. ಸ್ವರ್ಗವನ್ನು ಪಡೆದು ದೇವತೆಗಳಾಗಿರತಕ್ಕವರೂ ಸಹ ಮೋಕ್ಷವನ್ನು ಪಡೆಯಲು ಈ ರಾಷ್ಟ್ರದಲ್ಲಿ ಮತ್ತೆ ಹುಟ್ಟಿಬರುತ್ತಾರೆ''.

ಶ್ರೀ ಭಾಗವತದಲ್ಲಿ ಹೀಗೆ ಹೇಳಿದೆ -

**''ಅಹೋ ಅಮೀಷಾಂ ಕಿಮಕಾರಿ ಶೋಭನಂ**
**ಪ್ರಸನ್ನ ಏಷಾಂ ಸ್ವಿದುತ ಸ್ವಯಂ ಹರಿಃ ।**
**ಯೈರ್ಜನ್ಮ ಲಬ್ಧಂ ನೃಷು ಭಾರತಾಜಿರೇ**
**ಮುಕುಂದಸೇವೌಪಯಿಕಂ ಸ್ಪೃಹಾ ಹಿ ನಃ ॥''** ( ೫-೧೯-೨೧)

**ತಾತ್ಪರ್ಯ :** ದೇವತೆಗಳು ಹೀಗೆ ಹಾಡುತ್ತಾರೆ - ''ಆಹಾ! ಈ ಭರತ ಖಂಡದಲ್ಲಿ ಹುಟ್ಟಿದ ಜನರು ಎಷ್ಟು ಪುಣ್ಯ ಮಾಡಿರಬಹುದು! ಸ್ವಯಂ ಶ್ರೀ ಹರಿಯೇ ಪ್ರಸನ್ನನಾಗಿ ಇಲ್ಲಿ ಅವತರಿಸುತ್ತಾನಲ್ಲ. ಈ ಮುಕುಂದನನ್ನು ಸಾಕ್ಷಾತ್ ಸೇವಿಸಲು ಉಪಯುಕ್ತವಾದ ಮನುಷ್ಯ ಜನ್ಮವನ್ನು ಪಡೆದ ಈ ಭಾರತೀಯರು ಧನ್ಯರು! ನಮಗೂ ಇಲ್ಲಿ ಹುಟ್ಟಿಬರಲು ಬಯಕೆಯಾಗುತ್ತಿದೆ! ''

ಮಹಾತ್ಮನಾದ ಮನುವಿನ ಹೇಳಿಕೆ ಇದು -

**''ಏತದ್ದೇಶಪ್ರಸೂತಸ್ಯ ಸಕಾಶಾದಗ್ರಜನ್ಮನಃ ।**
**ಸ್ವಂ ಸ್ವಂ ಚರಿತ್ರಂ ಶಿಕ್ಷೇರನ್ ಪೃಥಿವ್ಯಾಂ ಸರ್ವಮಾನವಾಃ ॥''**

(ಮನುಸ್ಮೃತಿ ೨-೨೦)

**ತಾತ್ಪರ್ಯ :** '' ಈ ಭರತ ಖಂಡದಲ್ಲಿ ಜನಿಸಿದ ಬ್ರಾಹ್ಮಣನಿಂದ, ಈ ಪೃಥ್ವಿಯಲ್ಲಿರುವ ಸಕಲ ಮಾನವರೂ ತಮ್ಮ ತಮ್ಮ ನಡತೆಯನ್ನು ಕಲಿತುಕೊಳ್ಳಬೇಕು!'' ಎಷ್ಟು ಆತ್ಮಪ್ರತ್ಯಯದಿಂದ ಆಡಿದ ಆತ್ಮಪ್ರಶಂಸೆಯ ಧೀರವಾಣಿ ಇದು! ಆದ್ದರಿಂದಲೇ

ಸ್ವಾಮಿ ವಿವೇಕಾನಂದರು ಚಿಕಾಗೋದಲ್ಲಿ ಸೇರಿದ ವಿಶ್ವಧರ್ಮಸಮ್ಮೇಳನದಲ್ಲಿ ಸಕಲಪರದೇಶೀಯರನ್ನು ಉದ್ದೇಶಿಸಿ - ''ನಮ್ಮ ಭಾರತೀಯರು ಅಧ್ಯಾತ್ಮಜ್ಞಾನದಲ್ಲಿಯೂ, ಶಾಸ್ತ್ರ ವಿಜ್ಞಾನದಲ್ಲಿಯೂ ಅತ್ಯುನ್ನತಿಯನ್ನು ಏರಿದ್ದಾಗ ನೀವೆಲ್ಲರೂ ಕಾಡುಮನುಷ್ಯರಾಗಿದ್ದಿರಿ!'' ಎಂದು ವೀರವಾಣಿಯಿಂದ ಘೋಷಿಸಿದರು.

ಆದರೆ ಇಂದಿನ ಭರತ ಖಂಡದಲ್ಲಿರುವ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ , ಶಿವ ಶಿವ ! **''ಅತ್ಯುನ್ನತಿಃ ಪತನಹೇತುಃ ''** ಎಂಬ ಗಾದೆ ಸತ್ಯವೇ ಹೌದೆಂದು ಮನವರಿಕೆಯಾಗುತ್ತದೆ.

ಇಂದಿನ ಭಾರತ ದೇಶದಲ್ಲಿ ಸತ್ಯಸೌಜನ್ಯಗಳಿಗೆ ಸಂಚಕಾರ ಬಂದಂತೆ ಕಾಣುತ್ತದೆ. ಸ್ವಾರ್ಥ, ಧನಲೋಭಗಳು ಎಲ್ಲೆಲ್ಲಿಯೂ ವಿಜೃಂಭಿಸುತ್ತಿವೆ. ದಿನಪತ್ರಿಕೆಗಳಲ್ಲಿ ಕೊಲೆ, ಆತ್ಮಹತ್ಯೆ, ಕಳವು, ದರೋಡೆಗಳ ಸುದ್ದಿಯೇ ಅಧಿಕ. ಲಂಚದ ಹಾವಳಿಯನ್ನಂತೂ ಹೇಳುವಂತಿಲ್ಲ. ಮಾನವನು ದಾನವನಾಗಿ ವಿಜೃಂಭಿಸುತ್ತಿದ್ದಾನೆ. ಈ ನಡುವೆ ಉಗ್ರರ ಹಾವಳಿ ಹೆಚ್ಚುತ್ತಿದೆ. ಸರ್ಕಾರವು ಜಾತ್ಯತೀತವೆಂದು ಹೇಳಿಕೊಳ್ಳುತ್ತಿರುವುದರಿಂದ ಈ ಕ್ರೂರ ಜನರನ್ನು ಜಾತಿಯಿಂದ ಹೆಸರಿಸದೇ ಉಗ್ರರೆಂದು ನಾಮಕರಣ ಮಾಡಿದ್ದಾರೆ. ಅದು ಹೇಗಾದರೂ ಇರಲಿ. ದೌರ್ಜನ್ಯವು ಎಲ್ಲೆಲ್ಲಿಯೂ ಹೆಚ್ಚು ವಿಜೃಂಭಿಸುತ್ತಿದೆ. ಒಟ್ಟಿನಲ್ಲಿ ರಾಜನೀತಿಯು ಹಳಿತಪ್ಪಿರುವುದರಿಂದ ಕೆಟ್ಟತನವು ಭೂತದಂತೆ ನರ್ತಿಸತೊಡಗಿದೆ. ಇದು ಕಾಲಮಹಿಮೆಯೋ ಅಥವಾ ಪ್ರಜಾಪ್ರಭುತ್ವದ ಫಲವೋ ಹೇಳಲಾಗದು. **'ಕಾಲಸ್ಯ ಕಾರಣಂ ರಾಜಾ'** ಎಂಬ ನುಡಿಯೇ ಸತ್ಯವಾದೀತು.

ಭಗವದ್ಗೀತೆಯು ಹೇಳುವಂತೆ ಇದೆಲ್ಲವೂ ಆಸುರೀ ಸಂಪತ್ತು. ಇದು ಸಾಮಾನ್ಯ ಪ್ರಜೆಗಳಿಗೂ ವ್ಯಾಪಿಸಿ ಹಳ್ಳಿ ಹಳ್ಳಿಗಳಲ್ಲಿಯೂ ಹೆಚ್ಚುತ್ತಿರುವುದು ಸಜ್ಜನರಿಗೆ ಚಿಂತಾಜನಕವಾಗಿದೆ. ಇದೆಲ್ಲವೂ ಕಲಿಯುಗದ ಮಹಿಮೆಯೆಂದು ಹೇಳುವುದುಂಟು. ಒಟ್ಟಿನಲ್ಲಿ ನೀತಿಭ್ರಷ್ಟತೆಯು ಸಮಾಜ, ಸರಕಾರ, ಅಧಿಕಾರ, ರಾಜಕಾರಣಗಳನ್ನು ವ್ಯಾಪಿಸಿದೆ. ನ್ಯಾಯಾಧಿಕರಣವನ್ನು ಸಹ ಪ್ರವೇಶಿಸಿದೆ ಎಂಬ ಅಭಿಪ್ರಾಯವೂ ಉಂಟು.

ಇಂತಹ ಸಂದರ್ಭದಲ್ಲಿ ತಾವು ವಿಚಾರವಾದಿಗಳೆಂದೂ , ಬುದ್ಧಿಜೀವಿಗಳೆಂದೂ

ಹೇಳಿಕೊಂಡು ಹೆಮ್ಮೆಯಿಂದ ಹಿಗ್ಗುವ ಕೆಲವು ಸಾಹಿತಿಗಳ ಮಂಗಚೇಷ್ಟೆಗಳು ಕಡಿಮೆ ಹಾವಳಿಯನ್ನು ಮಾಡಿಲ್ಲ. ಕೆಟ್ಟ ನಡತೆಯವರ ಕೆಟ್ಟ ಕಥೆಗಳನ್ನೂ, ಕಾದಂಬರಿಗಳನ್ನೂ ರಚಿಸಿ ಓದುಗರಾದ ಯುವಕ - ಯುವತಿಯರ ವರ್ತನೆಯ ಮೇಲೆ ಕೆಟ್ಟ ಪರಿಣಾಮವನ್ನುಂಟುಮಾಡುತ್ತಿದ್ದಾರೆ. ಇನ್ನು ಕೆಲವರು ಬೇರೆ ಕೆಲಸವಿಲ್ಲದ್ದರಿಂದಲೋ, ಪುಸ್ತಕಗಳನ್ನು ಬರೆದು ಹಣವನ್ನೂ, ಪ್ರಸಿದ್ಧಿಯನ್ನೂ ಸುಲಭವಾಗಿ ಗಳಿಸಬೇಕೆಂಬ ದೃಷ್ಟಿಯಿಂದಲೋ - ''ದೇವರಿಲ್ಲ, ಪುನರ್ಜನ್ಮವಿಲ್ಲ, ವೇದಪುರಾಣಗಳು ಸುಳ್ಳು ಹೇಳತಕ್ಕವು, ದೇಹವೇ ಆತ್ಮ, ಸತ್ತ ಮೇಲೆ ಸರ್ವವೂ ಮುಗಿಯಿತು. ಹಿಂದೂಗಳಿಗೆ ಎಷ್ಟು ದೇವರು? ಕಲ್ಲು, ಮಣ್ಣು, ಮರ, ಹಾವು, ಗೋವುಗಳನ್ನು ದೇವರೆಂದು ಪೂಜಿಸುವ ಮೂಢತನಕ್ಕೆ ಮಿತಿಯೇ ಇಲ್ಲ''- ಎಂದು ಪ್ರಚಾರಮಾಡಿ ತಮ್ಮ ನೀತಿಭ್ರಷ್ಟತೆಯನ್ನು ಹೆಚ್ಚಿಸಿಕೊಂಡು ಸಂತೋಷಿಸುತ್ತಿದ್ದಾರೆ. ಅತ್ಯಂತ ಶೋಚನೀಯವಾದ ಸಂಗತಿಯೆಂದರೆ, ಹೀಗೆ ಬರೆಯತಕ್ಕವರು ಭಾರತಾಂಬೆಯ ಒಡಲಿನಿಂದ ಮೂಡಿಬಂದ ಹಿಂದೂಗಳೇ ಆಗಿ ಹಿಂದೂಮತವನ್ನು ಜರಿಯುತ್ತಿರುವುದು. ''.......ಮೃತ್ಯು ಕೊಡಲಿಕಾವು'' ಎಂಬ ಗಾದೆ ಈ ಜನರ ವಿಷಯದಲ್ಲಿ ಸತ್ಯವಾಗಿದೆ. ಹೀಗೆಯೇ ಮುಸ್ಲಿಂಮತವನ್ನಾಗಲಿ, ಕ್ರಿಶ್ಚಿಯನ್ ಮತವನ್ನಾಗಲಿ ನಿಂದಿಸುವ ಒಂದು ಮತವನ್ನಾದರೂ ಬರೆದಾರೇನು? ಬರೆದರೆ ಮರುದಿನವೇ ಕೈಕಾಲುಗಳನ್ನು ಮುರಿಸಿಕೊಳ್ಳಬೇಕಾಗುತ್ತದೆಯೆಂಬುದು ಈ ಧೀರರಿಗೆ ಗೊತ್ತಿದೆ!

ದೇವರಿದ್ದಾನೆಂದು ತಿಳಿದರೂ ಪಾಪಪುಣ್ಯಗಳನ್ನು ಗಣಿಸದೆ ಮದೋನ್ಮತ್ತರಾಗಿ ವರ್ತಿಸುವ ಜನತೆಗೆ, ಈ ಬುದ್ಧಿಜೀವಿಗಳ ನಾಸ್ತಿಕವಾದವು ನಿರ್ಭೀತಿಯಿಂದ ಭ್ರಷ್ಟಾಚಾರದಲ್ಲಿ ವರ್ತಿಸಲು ಪ್ರೋತ್ಸಾಹವನ್ನೀಯುತ್ತಿದೆ.

**''ಕಪಿರಪಿ ಚ ಕಾಪಿಶಾಯನಮದಮತ್ತೋ ವೃಶ್ಚಿಕೇನ ಸಂದಷ್ಟಃ ।**
**ಅಪಿ ಚ ಪಿಶಾಚಗ್ರಸ್ತಃ ಕಿಂ ಬ್ರೂಮೋ ವೈಕೃತಂ ತಸ್ಯ ॥''**

''ಮೊದಲೇ ಕಪಿ. ಅದು ಹೆಂಡವನ್ನು ಕುಡಿದು ಉನ್ಮತ್ತವಾಯಿತು. ಈ ನಡುವೆ

ಒಂದು ಚೇಳು ಅದನ್ನು ಕುಟುಕಿತು. ಇದು ಸಾಲದೆಂಬಂತೆ ಆ ಕಪಿಯಲ್ಲಿ ಒಂದು ಪಿಶಾಚದ ಆವೇಶವಾಯಿತು ! ಆಹಾ ! ಏನು ಹೇಳೋಣ, ಆ ಕಪಿಯ ಮಂಗಚೇಷ್ಟೆಯನ್ನು!'' ಎಂಬಂತಾಗಿದೆ.

ಈ ಪರಿಸ್ಥಿತಿಯಲ್ಲಿ ಪ್ರಜ್ಞಾವಂತರಾದ ವಿವೇಕಿಗಳ ಕರ್ತವ್ಯವೇನು? ಇದೆಲ್ಲವೂ ಕಲಿಯುಗದ ಮಹಿಮೆಯೆಂದು ಸುಮ್ಮನಿರಬೇಕೆ? ಅಥವಾ ಜನರ ನೀತಿಭ್ರಷ್ಟತೆಯನ್ನು ತಡೆಯಲು ಯಥೋಚಿತವಾಗಿ ಪ್ರಯತ್ನಿಸಬೇಕೆ? ಅಥವಾ ಏನು ಮಾಡಲಾದೀತು - ಎಂದು ಕೈಕಟ್ಟಿ ಕುಳಿತುಕೊಳ್ಳಬೇಕೆ? ಪ್ರಜ್ಞಾವಂತರು ಸಮಾಜದ ಸ್ವಚ್ಛತೆಗಾಗಿ - ಹಿತಕ್ಕಾಗಿ ಯಥಾಶಕ್ತಿ ಪ್ರಯತ್ನಿಸಲೇಬೇಕು. ಭಗವಂತನೇ ಗೀತೆಯಲ್ಲಿ -

**''ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥**
**ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥''**

(ಗೀತಾ ೪.೭-೮)

ಎಂದು ಸ್ಪಷ್ಟವಾಗಿ ಹೇಳಿದ್ದಾನೆ.

''ಅರ್ಜುನ, ಯಾವ ಯಾವಾಗ ಧರ್ಮಕ್ಕೆ ಕ್ಷೀಣತೆಯೂ, ಅಧರ್ಮಕ್ಕೆ ಉತ್ಥಿತಿಯೂ ಉಂಟಾಗುವುದೋ, ಆಗ ನನ್ನನ್ನು ನಾನು ಸೃಜಿಸಿಕೊಳ್ಳುತ್ತೇನೆ. (ಅವತಾರ ಮಾಡುತ್ತೇನೆ) ಸಜ್ಜನರನ್ನು ರಕ್ಷಿಸುವುದಕ್ಕಾಗಿಯೂ, ದುರ್ಜನರನ್ನು ನಾಶಮಾಡುವುದಕ್ಕಾಗಿಯೂ, ಧರ್ಮವನ್ನು ಸರಿಯಾಗಿ ಸ್ಥಾಪಿಸುವುದಕ್ಕಾಗಿಯೂ ನಾನು ಯುಗಯುಗಗಳಲ್ಲಿ ಅವತರಿಸಿ ಬರುತ್ತೇನೆ''.

ಹೀಗೆ ಭಗವಂತನೇ ಸಜ್ಜನರ ಹಿತಕ್ಕಾಗಿ ಅಧರ್ಮವನ್ನು ತಡೆಯಬೇಕೆಂದು ಇಷ್ಟು ಆಸಕ್ತಿಯನ್ನು ವಹಿಸಿರುವಾಗ ನಾವು ನಮ್ಮ ಹಿತಕ್ಕಾಗಿ, ನಮ್ಮ ಮುಂದಿನ ಸಂತತಿಯ ಹಿತಕ್ಕಾಗಿ ಯತ್ನಿಸದಿದ್ದರೆ ದೊಡ್ಡ ಕರ್ತವ್ಯಲೋಪವೇ ಆಗುತ್ತದೆ. ಶ್ರೀ ಶಂಕರರೇ

ಮೊದಲಾದ ಆಚಾರ್ಯರು ಧರ್ಮರಕ್ಷಣೆಗಾಗಿ - ಅಧರ್ಮದ ತಡೆಗಾಗಿ ಬಹುಶ್ರಮ ವಹಿಸಿ ನಾನಾ ಗ್ರಂಥಗಳನ್ನು ರಚಿಸಿ ಧರ್ಮಪ್ರಚಾರದಲ್ಲಿಯೇ ತಮ್ಮ ಆಯುಸ್ಸನ್ನು ಸವೆಸಿದ್ದಾರೆ. ಧರ್ಮರಕ್ಷಣೆಗಾಗಿಯೇ ಧರ್ಮಪೀಠಗಳನ್ನು ಸ್ಥಾಪಿಸಿದ್ದಾರೆ. ವರ್ಣಾಶ್ರಮಧರ್ಮಗಳ ವಿಚಾರವು ಒತ್ತಟ್ಟಿಗಿರಲಿ. ಸಜ್ಜನೋಚಿತವಾದ ಸದಾಚಾರ, ಶುಚಿಯಾದ ನಡತೆ, ಸತ್ಯ, ಅಹಿಂಸೆ - ಇತ್ಯಾದಿ ಸಾಮಾನ್ಯ ಧರ್ಮಗಳನ್ನಾದರೂ ಜನರು ಪಾಲಿಸದಿದ್ದರೆ ನಮ್ಮ ಬದುಕು ಕಾಡುಮೃಗಗಳ ಬದುಕಾಗುವುದೇ ಹೊರತು ಮಾನವರ ಬದುಕೆನಿಸುವುದಿಲ್ಲ. ಇದೆಲ್ಲವನ್ನೂ ಸಮೀಚೀನವಾಗಿ ಪರಿಶೀಲಿಸಿ ಶ್ರೀ ಸೋಂದಾ ಸ್ವರ್ಣವಲ್ಲೀ ಸಂಸ್ಥಾನದ ಧರ್ಮಪೀಠಾಧಿಪತಿಗಳಾದ ಪರಮಪೂಜ್ಯ ಶ್ರೀ ಶ್ರೀಮದ್ ಗಂಗಾಧರೇಂದ್ರ ಸರಸ್ವತೀ ಮಹಾಸ್ವಾಮಿಗಳವರು **'ಭಗವದ್ಗೀತಾ ಅಭಿಯಾನ'** ವೆಂಬ ಒಂದು ನೂತನ ಕಾರ್ಯಕ್ರಮವನ್ನು ಆರಂಭಿಸಿದ್ದಾರೆ. ಅಭಿಯಾನವೆಂದರೆ 'ಧಾರ್ಮಿಕ ದಂಡಯಾತ್ರೆ' ಎನ್ನಬಹುದು.

ಭಾರತೀಯ ಸಾಹಿತ್ಯದಲ್ಲಿ ಭಗವದ್ಗೀತೆ ಒಂದು ಶ್ರೇಷ್ಠವಾದ ಗ್ರಂಥ. ಸರ್ವೋಪನಿಷತ್ತುಗಳ ಸಾರ ಇದರಲ್ಲಿದೆ. ಕಠಿಣವಾದ ಅಧ್ಯಾತ್ಮ ಶಾಸ್ತ್ರವನ್ನು ಸರಳ ಶೈಲಿಯಲ್ಲಿ ಎಲ್ಲರಿಗೂ ತಿಳಿಯುವಂತೆ ಬೋಧಿಸುತ್ತದೆ. ಶ್ರೀಕೃಷ್ಣಾರ್ಜುನರ ಸಂಭಾಷಣೆಯ ರೂಪದಲ್ಲಿ ಪ್ರಶ್ನೋತ್ತರಗಳಿಂದ ಕೂಡಿರುವ ಪ್ರಯುಕ್ತ ಪ್ರಮೇಯವು ಸುಲಭವಾಗಿ ಮನವರಿಕೆಯಾಗುತ್ತದೆ. ಶ್ರೀಕೃಷ್ಣನ ಉತ್ತರವು ಚಮತ್ಕಾರಿಯಾದುದಲ್ಲದೇ, ವಿಶ್ವರೂಪದರ್ಶನವು ರಸಮಯವಾಗಿ ಸುಂದರವಾಗಿದೆ. ಆದ್ದರಿಂದ ಭಗವದ್ಗೀತೆಯನ್ನು ಶಾಸ್ತ್ರಕಾವ್ಯವೆನ್ನಬಹುದು. ಲೋಕವ್ಯವಹಾರಕ್ಕೆ ಉಪಯುಕ್ತವಾದ ವಿಚಾರಗಳೂ ಬಂದಿರುವುದರಿಂದ ಭಗವದ್ಗೀತೆಯು ಸರ್ವಗ್ರಾಹ್ಯವಾದದ್ದು. ಹದಿನೆಂಟು ಅಧ್ಯಾಯಗಳಿರುವ ಏಳುನೂರು ಶ್ಲೋಕಗಳೂ ನಿತ್ಯಪಾರಾಯಣಕ್ಕೆ ಯೋಗ್ಯವಾದವು. ಕಂಠಪಾಠಮಾಡಬೇಕಾದವುಗಳು. ಶ್ರೀಕೃಷ್ಣಾರ್ಜುನರ ಸಂವಾದವನ್ನು ಇಷ್ಟು ಮನೋಹರವಾದ ಶೈಲಿಯಲ್ಲಿ ಸಂಕ್ಷೇಪವಿಸ್ತರಗಳಿಂದ ನಮಗೆ ಒದಗಿಸಿಕೊಟ್ಟಿರುವ ಶ್ರೀವೇದವ್ಯಾಸ ಮಹರ್ಷಿಗಳಿಗೆ ನಾವು ಎಷ್ಟು ಕೃತಜ್ಞರಾಗಿದ್ದರೂ ಸಾಲದು.

**"ನಮೋಽಸ್ತು ತೇ ವ್ಯಾಸ ವಿಶಾಲಬುದ್ಧೇ**
**ಫುಲ್ಲಾರವಿಂದಾಯತಪತ್ರನೇತ್ರ ।**
**ಯೇನ ತ್ವಯಾ ಭಾರತತೈಲಪೂರ್ಣಃ**
**ಪ್ರಜ್ವಾಲಿತೋ ಜ್ಞಾನಮಯಃ ಪ್ರದೀಪಃ ॥"**

ಎಂದು ನುಡಿಯುತ್ತಾ ವ್ಯಾಸ ಮಹರ್ಷಿಗಳ ಲೋಕನುಗ್ರಹಬುದ್ಧಿಗಾಗಿ ಅವರಿಗೆ ನತಮಸ್ತರಾಗಲೇಬೇಕು. ಈ ಕಾರಣಗಳಿಂದಲೇ ಶ್ರೀ ಶಂಕರಾಚಾರ್ಯರೇ ಮೊದಲಾದ ವಿದ್ವಾಂಸರು ಭಗವದ್ಗೀತೆಗೆ ವಿಸ್ತೃತವಾಗಿ ವ್ಯಾಖ್ಯಾನಗಳನ್ನೇ ಬರೆದಿದ್ದಾರೆ.

ಪೂಜ್ಯ ಶ್ರೀ ಶ್ರೀಗಳವರು ಕೈಗೊಂಡಿರುವ ಈ ಅಭಿಯಾನದ ರಥಕ್ಕೆ ಈಗ ಪ್ರಚುರವಾಗುತ್ತಿರುವ ನಾಸ್ತಿಕವಾದವು ಅಡ್ಡಗೋಡೆಯಾಗಿದೆ. ಇದನ್ನು ಉರುಳಿಸಿದ ಹೊರತು ರಥವು ಮುಂದೆ ಸಾಗದು. ಆದ್ದರಿಂದ, ಭಗವದ್ಗೀತೆಯ ನೆರವಿನಿಂದಲೇ ಈ ಅಡ್ಡಗೋಡೆಯನ್ನು ಒಡೆಯುವುದು ಯುಕ್ತವಾಗಿದೆ. ನಾಸ್ತಿಕವಾದವೆಂಬ ಈ ರಕ್ತಬೀಜಾಸುರನ ಹನಿ ಹನಿ ರಕ್ತಬೀಜವನ್ನು ಸುಟ್ಟು ಹುಟ್ಟಡಗಿಸಬೇಕಾಗಿರುವುದರಿಂದ ಇದಕ್ಕಾಗಿ ಎಷ್ಟು ಜನ ಕಾರ್ಯಪ್ರವೃತ್ತರಾದರೂ ಸಾಲದು. ಎಷ್ಟು ತ್ವರಿತದಲ್ಲಿ ದುಡಿದರೂ ಸಾಲದು. ಈ ಪುಸ್ತಕವು ಈ ಮಹಾಕಾರ್ಯದಲ್ಲಿ ಒಂದು ಅಳಿಲು ಸೇವೆ. ೨-೩ ನೇ ಪ್ರಕರಣಗಳಲ್ಲಿ ಈ ಪ್ರಯತ್ನವನ್ನು ಮುಂದುವರೆಸಲಾಗುವುದು.

ಈ ನಾಸ್ತಿಕಾಸುರನಿಗೆ ನಾಲ್ಕು ವಿಕೃತ ಮುಖಗಳಿವೆ.

೧) ಸೃಷ್ಟಿಕರ್ತನಾದ ದೇವರು ಇಲ್ಲ - ಇದು ಮೊದಲನೆಯ ಮುಖದ ಘೋಷಣೆ.

೨) ದೇಹಾತಿರಿಕ್ತನಾದ ಜೀವಾತ್ಮನು ಇಲ್ಲ - ಇದು ಎರಡನೆಯ ಮುಖದ ಹೇಳಿಕೆ.

೩) ಆದ್ದರಿಂದ, ಪುನರ್ಜನ್ಮವಿಲ್ಲ - ಇದು ಮೂರನೆಯ ಮುಖದ ನುಡಿ.

೪) **ಏವಂ ಚ ಧರ್ಮ** - ಅಧರ್ಮ, ಪಾಪಪುಣ್ಯವೆಂಬುದು ಮೂಢನಂಬಿಕೆ - ಎಂದು ನಾಲ್ಕನೆಯ ಮುಖ ಉಪಸಂಹಾರ.

ನಮ್ಮ ಭಾರತೀಯರು ದೇವರಿದ್ದಾನೆ ಎಂಬ ನಂಬಿಕೆಯಿಂದಲೇ ತಮ್ಮ ಸಂಸ್ಕೃತಿಯನ್ನು ಬೆಳೆಸಿಕೊಳ್ಳುತ್ತಾ ಬಂದಿದ್ದಾರೆ. ನಮ್ಮ ಶಾಸ್ತ್ರಗ್ರಂಥಗಳು, ಕಾವ್ಯಗಳು,

ದೇವಸ್ಥಾನದ ಭವ್ಯಶಿಲ್ಪಗಳು, ಜನನದಿಂದ ಮರಣಪರ್ಯಂತ ನಡೆಯುವ ಧಾರ್ಮಿಕ ಕಾರ್ಯಗಳು, ಮರಣೋತ್ತರ ಕಾರ್ಯಗಳೂ ಸಹ ಆಸ್ತಿಕವಾದದ ತಳಹದಿಯ ಮೇಲೆ ಭದ್ರವಾಗಿ ನಿಂತುಕೊಂಡಿವೆ. ದೇವರಲ್ಲಾಗಲಿ, ಪುನರ್ಜನ್ಮ ಪುಣ್ಯ ಪಾಪಗಳಲ್ಲಾಗಲೀ ಜನತೆಯ ನಂಬಿಕೆ ಶಿಥಿಲವಾದೊಡನೆ ಇವೆಲ್ಲವೂ ನಶಿಸಿಹೋಗುವ ಸಂಭವ ಉಂಟು. ಆದರೆ, ಈ ಸನಾತನ ಧರ್ಮವು ಎಂದಿಗೂ ನಶಿಸುವುದಿಲ್ಲ. ಜ್ಞಾನಿಗಳಾದ ಮಹರ್ಷಿಗಳಿಂದ ದೃಷ್ಟವಾದದ್ದೂ, ಘನ ವಿದ್ವಾಂಸರಿಂದ ಯುಕ್ತಿಯುಕ್ತವಾಗಿ ಗಟ್ಟಿಗೊಳಿಸಲ್ಪಟ್ಟದ್ದೂ, ಯೋಗಿಗಳ ಅನುಭವಾರೂಢವಾದದ್ದೂ, ಚಿರಂತನಕಾಲದಿಂದ ಮಹಾಜನರಿಂದ ಸ್ವೀಕೃತವೂ ಆದ ಈ ಪ್ರಾಚೀನಧರ್ಮವು ತುಂಬಾ ಗಟ್ಟಿಯಾದ ತಳಹದಿಯ ಮೇಲೆ ನಿಂತಿದೆ. ಬರ್ಬರವಾದ ವಿದೇಶೀಯ ದಾಳಿಕೋರರ ಹೊಡೆತಗಳಿಗೆ ನಲುಗದ ಈ ಸಂಸ್ಕೃತಿಯು ನಾಸ್ತಿಕವಾದಿಗಳ ನಡುಗುವ ಕೈಯಿಂದ ಹೊಡೆದ ಆಟದ ಬಡಪೆಟ್ಟಿಗೆ ಬಗ್ಗೀತೆ? ಆದರೂ ಈ ನಾಸ್ತಿಕವಾದಿಗಳು ಖ್ಯಾತಿಯ ಬಯಕೆಯಿಂದ ಬಿಳಿಯ ಕಾಗದದ ಮೇಲೆ ಕರಿಯ ಗೆರೆಯನ್ನೆಳೆದು ಕೀರ್ತಿಶೇಷರೇ ಆಗುತ್ತಿದ್ದಾರೆ ! (ಕೀರ್ತಿಶಬ್ದಕ್ಕೆ ಕೆಸರು ಎಂಬ ಇನ್ನೊಂದು ಅರ್ಥವಿದೆ.) ಎಷ್ಟಾದರೂ ಬೆಂಕಿಯ ಕಿಡಿಯನ್ನೂ, ಹಾವಿನ ಮರಿಯನ್ನೂ ಉಪೇಕ್ಷಿಸಬಾರದೆಂದು ಈ ವಾದವನ್ನು ಖಂಡಿಸಬೇಕಾಗಿದೆ.

ಭಗವಾನ್ ವೇದವ್ಯಾಸಮಹರ್ಷಿಗಳು ದಿವ್ಯಜ್ಞಾನಿಗಳೆಂದು ಪರಮಸತ್ಯವನ್ನು ಯಥಾರ್ಥವಾಗಿ ಬಲ್ಲವರೆಂದೂ ಭಾರತೀಯರಾದ ನಾವು ದೃಢವಾಗಿ ನಂಬಿದ್ದೇವೆ. ಲಕ್ಷಶ್ಲೋಕಾತ್ಮಕವಾದ ಮಹಾಭಾರತವನ್ನೂ ಅದರಲ್ಲಿ ಸರ್ವಜನಪೂಜಿತವಾದ ಭಗವದ್ಗೀತೆಯನ್ನೂ ಲೋಕಕಲ್ಯಾಣಾರ್ಥವಾಗಿ ರಚಿಸಿ ಸೇರಿಸಿದ್ದಾರೆಂದೂ ಸ್ಪಷ್ಟವಾಗಿದೆ. ಲೋಕಕಲ್ಯಾಣದ ಹೊರತಾಗಿ ಇನ್ನಾವ ಪ್ರಯೋಜನವನ್ನು ಅವರು ಬಯಸಲೂ ಇಲ್ಲ, ಪಡೆಯಲೂ ಇಲ್ಲ. ಭಗವಾನ್ ಶ್ರೀಕೃಷ್ಣನು ಅರ್ಜುನನ ವ್ಯಾಜದಿಂದ ಜನತೆಯ ಉದ್ಧಾರಕ್ಕಾಗಿಯೇ ಗೀತೆಯನ್ನು ಅನುಗ್ರಹಿಸಿದ್ದಾನೆ. ಈ ಗೀತೆಯು ಸರ್ವೋಪನಿಷತ್ತುಗಳ ಸಾರವಾಗಿರುವುದರಿಂದ ಪರಮಪ್ರಾಮಾಣ್ಯವು ಈ ಗ್ರಂಥಕ್ಕೆ

ಸಲ್ಲಲೇಬೇಕು. ಈ ಗ್ರಂಥವು ನಾಸ್ತಿಕವಾದವನ್ನು ತುಂಡುತುಂಡಾಗಿ ಕತ್ತರಿಸಿ ಸುಟ್ಟು ಬೂದಿ ಮಾಡುವ ಬ್ರಹ್ಮಾಸ್ತ್ರವಾಗಿರುವುದರಿಂದ, ಇದರ ಆಶ್ರಯದಿಂದಲೇ ನಾಸ್ತಿಕವಾದವನ್ನು ಖಂಡಿಸಿ ಆಸ್ತಿಕವಾದವನ್ನು ಪ್ರತಿಷ್ಠಾಪಿಸಲು ಯಥಾಶಕ್ತಿಯಾಗಿ ಯತ್ನಿಸಲಾಗುವುದು.

ಗೀತಾಭಾಷ್ಯದ ಆರಂಭದಲ್ಲಿ ಶ್ರೀಶಂಕರಾಚಾರ್ಯರು ''ಧರ್ಮಸ್ಥಾಪನೆಗಾಗಿ ಶ್ರೀಮನ್ನಾರಾಯಣನು ವಸುದೇವನಿಂದ ದೇವಕಿಯ ಗರ್ಭದಲ್ಲಿ ಕೃಷ್ಣನೆಂಬ ಹೆಸರನ್ನು ಧರಿಸಿ ಅವತರಿಸಿದನೆಂದು'' ಬರೆದಿದ್ದಾರೆ. ಇದರಿಂದ ದೇವರು ಇದ್ದಾನೆಂದೂ, ಧರ್ಮರಕ್ಷಣೆಗಾಗಿ ಮನುಷ್ಯ ರೂಪವನ್ನು ಧರಿಸಿ ಅವತರಿಸುತ್ತಾನೆಂದೂ ಗೊತ್ತಾಗುತ್ತದೆ. ಈ ಸತ್ಯವನ್ನು ಶ್ರೀಕೃಷ್ಣನೇ **''ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ''** ಮುಂತಾದ ವಚನಗಳಿಂದ ಮುಂದೆ ವಿವರಿಸಿ ಹೇಳಿದ್ದಾನೆ. ದೇವರು ನಿರಾಕಾರನಾದರೂ ಅವಶ್ಯಕವೆನಿಸಿದಾಗ ತನಗೊಂದು ರೂಪವನ್ನು ಕಲ್ಪಿಸಿಕೊಳ್ಳುವುದರಲ್ಲಿ ಆಶ್ಚರ್ಯವೇನೂ ಇಲ್ಲ, ವಿರೋಧವೂ ಇಲ್ಲ. ಸಾಕಾರವಾದ ಈ ಬ್ರಹ್ಮಾಂಡವನ್ನೇ ನಿರ್ಮಿಸಿದವನಿಗೆ ತನಗೊಂದು ರೂಪವನ್ನು ಕಲ್ಪಿಸಿಕೊಳ್ಳಲು ಶಕ್ಯವಿಲ್ಲವೆ? ಶಕ್ಯ ಉಂಟು. ಆದ್ದರಿಂದಲೇ **''ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥''** (೪. ೬) ''ನನ್ನ ವೈಷ್ಣವೀಮಾಯೆಯನ್ನು ವಶಪಡಿಸಿಕೊಂಡು ಮಾಯೆಯಿಂದಲೇ ಹುಟ್ಟುತ್ತೇನೆ - ದೇಹಧಾರಿಯಾಗುತ್ತೇನೆ'' ಎಂದು ಹೇಳಿದ್ದಾನೆ. ಸ್ವತಃ ಭಗವಂತನು ನಿರಾಕಾರನೇ. ಆದ್ದರಿಂದಲೇ ಕಣ್ಣಿಗೆ ಕಾಣಿಸುವುದಿಲ್ಲ. ಯಾವ ಇಂದ್ರಿಯಗಳಿಗೂ ಗೋಚರಿಸುವುದಿಲ್ಲ. ಇಂದ್ರಿಯಗಳಿಗೆ ಗೋಚರಿಸಬೇಕಾದರೆ ಮನುಷ್ಯರಿಗಿರುವಂತೆ ಒಂದು ದೇಹವಿರಬೇಕು. ದೇಹವಾದರೋ ಪಂಚ ಮಹಾಭೂತಗಳಿಂದ ರಚಿತವಾಗಿರಬೇಕು. ಆಕಾಶಾದಿ ಪಂಚಮಹಾಭೂತಗಳನ್ನು ಸೃಷ್ಟಿಸಿದವನೇ ದೇವರು - ಈಶ್ವರ. **''ಆತ್ಮನಃ ಆಕಾಶಃ ಸಂಭೂತಃ ಆಕಾಶದ್ವಾಯುಃ ''** ಇತ್ಯಾದಿ ಶ್ರುತಿಗಳು ಪರಮಾತ್ಮನಿಂದಲೇ ಈ ಪಂಚಭೂತಗಳ ಸೃಷ್ಟಿಯಾಗಿದೆಯೆಂದು ಸಾರಿ ಹೇಳುತ್ತವೆ. ಆದ್ದರಿಂದ, ದೇವರು ನಿರಾಕಾರನೆಂಬುದು ಸಿದ್ಧವಾಗುತ್ತದೆ. ಅವನೇ ಸೃಷ್ಟಿಸುವ ಪಂಚಭೂತಗಳಿಂದ ಮೊದಲೇ

ಅವನಿಗೆ ಹೇಗೆ ಇದ್ದೀತು?

**''ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ।**

**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ॥ ''**( ೪. ೫ )

''ಅರ್ಜುನ, ನನಗೂ ನಿನಗೂ ಬಹಳ ಜನ್ಮಗಳು ಆಗಿ ಹೋದವು. ಅವೆಲ್ಲವನ್ನೂ ನಾನು ಬಲ್ಲೆ. ನೀನು ಮಾತ್ರ ಅವುಗಳನ್ನರಿಯೆ.''

ಶ್ರೀಕೃಷ್ಣಾವತಾರವಲ್ಲದೆ ಇನ್ನೂ ಎಷ್ಟೋ ಅವತಾರಗಳನ್ನು ದೇವರು ಮಾಡಿದ್ದಾನೆ ಎಂಬುದಕ್ಕೂ, ಅವನು ಸರ್ವಜ್ಞನೆಂಬುದಕ್ಕೂ ಈ ಶ್ಲೋಕವು ಪ್ರಮಾಣವಾಗಿದೆ. ಅರ್ಜುನನಿಗೂ ಎಷ್ಟೋ ಜನ್ಮಗಳು ಕಳೆದುಹೋಗಿವೆ - ಎಂಬ ವಚನದಿಂದ ಜೀವಾತ್ಮನಿದ್ದಾನೆಂದೂ ಅವನು ದೇಹಾತಿರಿಕ್ತನೆಂದೂ ಸ್ಪಷ್ಟವಾಗುತ್ತದೆ. ಜೀವನಿಗೆ ಇನ್ನೊಂದು ಜನ್ಮಬರಬೇಕಾದರೆ ಅದಕ್ಕೆ ಕಾರಣವಿರಬೇಕು. ಆ ಕಾರಣ ಯಾವುದು? **''ಭೋಗಾಯತನಂ ಶರೀರಮ್''** ಎಂದು ದಾರ್ಶನಿಕರು ದೇಹದ ಲಕ್ಷಣವನ್ನು ಹೇಳಿದ್ದಾರೆ. 'ಸುಖ -ದುಃಖಗಳ ಅನುಭವಕ್ಕೆ ಆಶ್ರಯವಾದದ್ದು ದೇಹ' ಎಂದು ತಾತ್ಪರ್ಯ. ಸುಖ - ದುಃಖಗಳಿಗೆ ಧರ್ಮಾಧರ್ಮಗಳು ಕಾರಣ. ಧರ್ಮದಿಂದ ಎಂದರೆ ಪುಣ್ಯಕಾರ್ಯದಿಂದ ಸುಖವೂ, ಅಧರ್ಮದಿಂದ ಎಂದರೆ ಪಾಪದಿಂದ ದುಃಖವೂ ಉಂಟಾಗುತ್ತದೆ. ಈ ಜನ್ಮದಲ್ಲಿ ಅವುಗಳ ಅನುಭವಕ್ಕೆ ಸಾಕಷ್ಟು ಆಯಸ್ಸು ಇಲ್ಲದ್ದರಿಂದ ಆ ಕರ್ಮಶೇಷವನ್ನು ಅನುಭವಿಸುವುದಕ್ಕಾಗಿ ಇನ್ನೊಂದು ಜನ್ಮವು ಪ್ರಾಪ್ತವಾಗುತ್ತದೆ. ಹೀಗೆ, ಕರ್ಮ - ಫಲಾನುಭವ ಇವುಗಳ ಸರಣಿಯು ಸರಪಳಿಯಂತೆ ಗಂಟುಬಿದ್ದು ಪುನರ್ಜನ್ಮಗಳು ಮುಂದುವರಿಯುತ್ತಲೇ ಇರುತ್ತವೆ. ಅರ್ಜುನನು ಒಂದು ಪ್ರಶ್ನೆಯನ್ನು ಹಾಕುತ್ತಾನೆ. 'ಶ್ರೀಕೃಷ್ಣ, ನೀನು ಹೇಳಿದಂತೆ ಒಬ್ಬನು ಯೋಗಾಭ್ಯಾಸದಲ್ಲಿ ನಿರತನಾಗಿರುತ್ತಾನೆ. ಆದರೆ, ಯೋಗಸಿದ್ಧಿಯಾಗದೇ ಅವನು ಸತ್ತು ಹೋದರೆ ಆಗ ಅವನ ಗತಿಯೇನು? ಅವನು ಮಾಡಿದ ಶ್ರಮವೆಲ್ಲವೂ ವ್ಯರ್ಥವಾಗಿಬಿಡುವುದಲ್ಲವೇ?'' ಅದಕ್ಕೆ ಶ್ರೀ ಕೃಷ್ಣನು ಹೇಳಿದ ಉತ್ತರ ಹೀಗಿದೆ - ''ಅರ್ಜುನ, ಯೋಗದಲ್ಲಿ ನಿರತನಾದವನ ಪ್ರಯತ್ನ ಎಂದಿಗೂ ವ್ಯರ್ಥವಾಗುವುದಿಲ್ಲ. ಆ ಯೋಗಿಯು

ಪುಣ್ಯಾತ್ಮರಿಗೆ ದೊರೆಯುವ ಲೋಕದಲ್ಲಿ ಸುಖವಾಗಿದ್ದು ಮತ್ತೆ ಶ್ರೀಮಂತರಾದ ಸಜ್ಜನರ ಮನೆಯಲ್ಲಿಯೋ ಅಥವಾ ಪ್ರಾಜ್ಞರಾದ ಯೋಗಿಗಳ ವಂಶದಲ್ಲಿಯೋ ಹುಟ್ಟಿ ತನ್ನ ಯೋಗಾಭ್ಯಾಸವನ್ನು ಮುಂದುವರಿಸುತ್ತಾನೆ. ಹೀಗೆ ಎಷ್ಟೋ ಜನ್ಮಗಳವರೆಗೆ ಪೂರ್ವಸಂಸ್ಕಾರದ ಬಲದಿಂದ ಯೋಗ ಸಿದ್ಧಿಯನ್ನು ಪಡೆದು ಮುಕ್ತನಾಗುತ್ತಾನೆ. (ಗೀತಾ ೬-೨೮ ರಿಂದ ೪೫ರವರೆಗೆ )

ಇದರಿಂದ ಪ್ರತಿಯೊಬ್ಬ ಮಾನವನಿಗೂ, ಪ್ರಾಣಿಗಳಿಗೂ ಮತ್ತೆ ಮತ್ತೆ ಜನ್ಮಗಳು ಬರುತ್ತಲೇ ಇರುವುದೆಂದೂ ಮೋಕ್ಷವನ್ನು ಪಡೆದ ಮೇಲೆ ಮಾತ್ರ ಪುನರ್ಜನ್ಮದ ಸರಣಿ ನಿಂತುಹೋಗುವುದೆಂದೂ ಗೊತ್ತಾಗುತ್ತದೆ.

ಈ ಸಂದರ್ಭದಲ್ಲಿ ವಿಶ್ವರೂಪದರ್ಶನಯೋಗದ ಕೆಲವು ಶ್ಲೋಕಗಳು ಗಮನಾರ್ಹವಾದವು. ಪಾರ್ಥನು ''ಹೇ ಯೋಗೇಶ್ವರ, ನಿನ್ನ ಈಶ್ವರೀಯ ವಿಶ್ವರೂಪವನ್ನು ನೋಡಬೇಕೆಂದು ನನಗೆ ಇಚ್ಛೆಯಾಗಿದೆ. ಅನುಗ್ರಹಿಸು'' ಎಂದು ಬೇಡಿಕೊಂಡಾಗ ಶ್ರೀಕೃಷ್ಣನು ಅದನ್ನು ತೋರಿಸುತ್ತಾನೆ. ಮನುಷ್ಯನೇತ್ರದಿಂದ ಅದನ್ನು ನೋಡಲು ಅರ್ಜುನನಿಗೆ ಸಾಧ್ಯವಿಲ್ಲವೆಂದು ದಿವ್ಯನೇತ್ರಗಳನ್ನು ಅವನಿಗೆ ಕೊಟ್ಟು ಅನಂತರ ತನ್ನ ವಿಶ್ವರೂಪವನ್ನು ತೋರಿಸುತ್ತಾನೆ.

ವಿಶ್ವರೂಪವೆಂದರೇನು? ಸಮಸ್ತ ಬ್ರಹ್ಮಾಂಡಗಳಿಂದಲೂ ಕೂಡಿದ ವಿಶ್ವವೇ ತಾನಾಗಿರುವೆನೆಂದೂ, ವಿಶ್ವದ ಸಮಸ್ತಕಾರ್ಯಗಳೂ ತನಗೆ ಅಧೀನವಾಗಿವೆಯೆಂದೂ, ಕಣ್ಣಿಂದ ನೋಡಿ ತಿಳಿಯುವಂತೆ ಪ್ರದರ್ಶಿಸುವ ದಿವ್ಯರೂಪವೇ ವಿಶ್ವರೂಪ. ಅತ್ಯದ್ಭುತವಾದ ಈ ವಿಶ್ವರೂಪವನ್ನು ನೋಡಿ ವಿಸ್ಮಯದಿಂದ ಹೆದರಿ ನಡುಗಿ ಹೋದ ಅರ್ಜುನನು ''ಸ್ವರ್ಗ ಭೂಲೋಕಗಳ ನಡುವಣ ಭಾಗವನ್ನೂ, ಸಮಸ್ತ ಭೂಲೋಕವನ್ನು ನೀನೇ ವ್ಯಾಪಿಸಿಬಿಟ್ಟಿದ್ದೀಯೆ! ಓ ಮಹಾತ್ಮ! ಅದ್ಭುತವೂ ಉಗ್ರವೂ ಆದ ನಿನ್ನ ಈ ವಿಶ್ವರೂಪವನ್ನು ಕಂಡು ಮೂರು ಲೋಕವೂ ತಲ್ಲಣಿಸಿಹೋಗಿದೆ'' ಎಂದು ನಾನಾ ವಿಧವಾಗಿ ಹೆದರುತ್ತಲೇ ಹೇಳಿ ನಮಸ್ಕರಿಸುತ್ತಾನೆ. ನಂತರ ಭಗವಂತನು ಹೇಳುವ ಮಾತುಗಳಿವು - ''ಅರ್ಜುನ, ಈ ಲೋಕದಲ್ಲಿರುವ ಸಮಸ್ತ ಜನರನ್ನು ಕೊಲ್ಲುವ

ಕಾಲಪುರುಷನೇ ನಾನು. ಈ ಲೋಕದಲ್ಲಿರತಕ್ಕವರನ್ನು ಕೊಲ್ಲಲು ತೊಡಗಿದ್ದೇನೆ. ನೀನು ಯುದ್ಧ ಮಾಡದಿದ್ದರೂ ಎದುರು ಪಕ್ಷದಲ್ಲಿರುವ ಭೀಷ್ಮದ್ರೋಣಾದಿಗಳನ್ನು ನಾನೇ ಕೊಂದು ಹಾಕುತ್ತೇನೆ. ಅವರೆಲ್ಲರೂ ಸತ್ತುಹೋದರೆಂದೇ ತಿಳಿ. ಪಾರ್ಥ, ನೆಪಮಾತ್ರವಾಗಿ ಯುದ್ಧಮಾಡಿ ಕೀರ್ತಿಯನ್ನು ಪಡೆದುಕೋ''.

ಇವೇ ಮೊದಲಾದ ಸಂವಾದಗಳಿಂದ ಈಶ್ವರನೇ ಈ ಜಗತ್ತಿನ ಸೃಷ್ಟಿಸ್ಥಿತಿಲಯಕರ್ತನೆಂದು ನಿಶ್ಚಿತವಾಗಿ ತಿಳಿದು ಬರುತ್ತದೆ. ಈ ವಿಷಯದಲ್ಲಿ ಪೂರ್ಣವಾದ ನಂಬಿಕೆಯನ್ನಿಟ್ಟಿರುವ ಆಸ್ತಿಕರು ಇದ್ದಾರೆ. ಈ ಆಸ್ತಿಕರ ಸಂಖ್ಯೆಯೇ ನಾಸ್ತಿಕರಿಗಿಂತ ಅಧಿಕವಾಗಿದೆ. ಹೀಗೆ ದೇವರಲ್ಲಿ ನಂಬಿಕೆಯನ್ನಿಟ್ಟು ಪಾಪಪುಣ್ಯಗಳನ್ನು ಒಪ್ಪತಕ್ಕವರೇ ಬಹಳವಾಗಿದ್ದರೂ ಲೋಕದಲ್ಲಿ ಕೊಲೆ, ಕಳ್ಳತನ, ವಂಚನೆ, ದ್ವೇಷ, ಅಸೂಯೆ ಮುಂತಾದವುಗಳ ಹಾವಳಿ ತುಂಬಿಕೊಂಡಿರುವುದಕ್ಕೆ ಕಾರಣವೇನು? - ಎಂಬ ಪ್ರಶ್ನೆ ಹುಟ್ಟುತ್ತದೆ. ಅಜ್ಞಾನದಿಂದ ಎಂಬುದು ಉತ್ತರವಲ್ಲ. ಕೊಲೆ, ಕಳ್ಳತನ, ಸುಳ್ಳು - ಮುಂತಾದವು ಪಾಪಕೃತ್ಯಗಳೆನ್ನುವುದು ಸಾಮಾನ್ಯ ಜನರಿಗೂ ತಿಳಿದೇ ಇರುತ್ತದೆ. ಅಕ್ಷರ ಜ್ಞಾನವು ಇಲ್ಲದ ಮೂಢನೂ ಸಹ ಇವು ಪಾಪಕೃತ್ಯಗಳೆಂದು ಒಪ್ಪುತ್ತಾನೆ. ಧರ್ಮಶಾಸ್ತ್ರಾದಿಗ್ರಂಥಗಳನ್ನು ಓದಿಯೇ ಇದು ಪಾಪ, ಇದು ಪುಣ್ಯ ಎಂದು ತಿಳಿಯಬೇಕಾಗಿಲ್ಲ. ಭರ್ತೃಹರಿಯೆಂಬ ದಾರ್ಶನಿಕನು ವಾಕ್ಯಪದೀಯದಲ್ಲಿ ಹೇಳಿದ ಈ ಶ್ಲೋಕವು ಸ್ಮರಣೀಯವಾದದ್ದು -

**''ಇದಂ ಪುಣ್ಯಮಿದಂ ಪಾಪಮಿತ್ಯೇವಾಸ್ಮಿನ್ ಪದದ್ವಯೇ ।**
**ಆಚಂಡಾಲಂ ಮನುಷ್ಯಾಣಾಮಲ್ಪಂ ಶಾಸ್ತ್ರಪ್ರಯೋಜನಮ್ ॥''**

(ಬ್ರಹ್ಮಕಾಂಡ , ಶ್ಲೋಕ - ೪೦)

''ಇದು ಪುಣ್ಯ, ಇದು ಪಾಪ ಎಂಬೆರಡು ಶಬ್ದಗಳ ವಿಷಯದಲ್ಲಿ ಪಾಮರರಿಂದ ಹಿಡಿದು ಎಲ್ಲ ಮನುಷ್ಯರಿಗೂ ಶಾಸ್ತ್ರದಿಂದಾಗುವ ಪ್ರಯೋಜನ ಅತ್ಯಲ್ಪ.'' ಸ್ವತಃ ಇದು ಪಾಪ, ಇದು ಪುಣ್ಯ ಎಂಬುದು ತಿಳಿದೇ ಇರುತ್ತದೆ.

ಸತ್ಯವನ್ನು ಹೇಳುವುದು, ಪರೋಪಕಾರ, ದಯೆ - ಮೊದಲಾದವು ಪುಣ್ಯಕಾರ್ಯಗಳು. ಸುಳ್ಳು ಹೇಳುವುದು, ಕಳ್ಳತನ, ಹಿಂಸೆ - ಮೊದಲಾದವು ಪಾಪಕಾರ್ಯಗಳು - ಎಂಬುದು ಎಂತಹ ವಿದ್ಯಾಹೀನನಿಗೂ ಗೊತ್ತಿದೆ. ಕಳ್ಳನೂ ಸಹ ಕಳ್ಳತನವು ಕೆಟ್ಟದ್ದು ಎಂದು ಒಪ್ಪಿಕೊಳ್ಳುತ್ತಾನೆ. ಈ ಭಾರತ ದೇಶದಲ್ಲಿ ಶಿಷ್ಟಾಚಾರವು ಇಷ್ಟು ದೃಢವಾಗಿ ನೆಲೆಸಿದೆ. ಶಾಸ್ತ್ರದ ಪ್ರಭಾವ ಬಹುದೊಡ್ಡದು. ವೇದಾದಿಶಾಸ್ತ್ರಗಳು ಪ್ರಾಮಾಣಿಕಗಳಾಗಿದ್ದರಿಂದಲೇ ಅವುಗಳಿಂದ ಜನರು ಇನ್ನಷ್ಟು ಪ್ರಭಾವಿತರಾಗಿದ್ದಾರೆ. ಹಾಗಾದರೆ ಈ ದೇಶದಲ್ಲಿ ದುಷ್ಟತನವು ಹೆಚ್ಚಾಗಿ ಮೆರೆಯುತ್ತಿರುವುದೇಕೆ? ಎಂಬ ಪ್ರಶ್ನೆಗೆ ರಜೋಗುಣ, ತಮೋಗುಣಗಳು ಈ ಕಾಲದಲ್ಲಿ ಉಲ್ಬಣಿಸಿರುವುದರಿಂದ ಕಾಮ, ಕ್ರೋಧ, ಸ್ವಾರ್ಥಪರತೆ - ಮೊದಲಾದವು ಜನರ ಸ್ವಭಾವವನ್ನು ಪರಿವರ್ತಿಸಿಬಿಟ್ಟಿವೆ ಎಂದು ಹೇಳಬೇಕಾಗಿದೆ. ಭಗವದ್ಗೀತೆಯ ೧೬ ನೇ ಅಧ್ಯಾಯದಲ್ಲಿ ಹೇಳಿರುವುದೇನೆಂದರೆ - ''ದೈವೀ ಸಂಪತ್ತು, ಆಸುರೀ ಸಂಪತ್ತು ಎಂದು ಎರಡು ಬಗೆಯ ಮಾನವ ಸ್ವಭಾವಗಳುಂಟು. ಸತ್ತ್ವಗುಣದಿಂದ ದೈವೀ ಸಂಪತ್ತು, ರಜಸ್ತಮೋಗುಣಗಳಿಂದ ಆಸುರಿಸಂಪತ್ತು ಪ್ರಾಪ್ತವಾಗುತ್ತದೆ. ಇದೆಲ್ಲವೂ ಜನ್ಮ ಜನ್ಮಾಂತರಗಳ ಪುಣ್ಯ ಪಾಪಗಳ ಫಲ. ಆಸುರ ಸ್ವಭಾವದವರಿಗೆ ಶೌಚ, ಆಚಾರಗಳಿಲ್ಲ. ಈ ಆಸುರ ಸ್ವಭಾವದವರು ಹೇಳುವುದೇನೆಂದರೆ - ''ಈ ಜಗತ್ತೆಲ್ಲವೂ ಸುಳ್ಳಿನಿಂದ ತುಂಬಿದೆ. ಇದಕ್ಕೆ ಧರ್ಮಾಧರ್ಮಗಳ ಆಧಾರವೇನೂ ಇರುವುದಿಲ್ಲ. ಸೃಷ್ಟಿಕರ್ತನಾದ ಈಶ್ವರನು (ದೇವರು) ಇಲ್ಲ. ಕಾಮದಿಂದ ಪ್ರೇರಿತರಾದ ಸ್ತ್ರೀಪುರುಷರ ಸಂಸರ್ಗದಿಂದ ಪ್ರಾಣಿಗಳೂ, ಮನುಷ್ಯರೂ ಹುಟ್ಟುತ್ತಾರೆ. ಜಗತ್ತು ಅನಾದಿಯಾಗಿ ಇದ್ದೇ ಇದೆ.'' ಈ ದೃಷ್ಟಿಯನ್ನವಲಂಬಿಸಿದ ಈ ಆಸುರಪ್ರಕೃತಿಯವರು ಕೆಟ್ಟಕೆಲಸಗಳಲ್ಲಿ ತೊಡಗುತ್ತಾರೆ. ಎಂದಿಗೂ ತೀರದ ಅಪಾರವಾದ ಆಸೆಯನ್ನಿಟ್ಟುಕೊಂಡು ಕ್ರೂರಕರ್ಮಗಳನ್ನು ಮಾಡುತ್ತಾ ಜನತೆಗೆ ಶತ್ರುಗಳಾಗಿಬಿಡುತ್ತಾರೆ. ಇವರ ಆಸೆಗೆ ಅಂತ್ಯವೇ ಇರುವುದಿಲ್ಲ. ಕಾಮೋಪಭೋಗಗಳೇ ಜೀವನದ ಗುರಿ ಎಂದು ತಿಳಿದು ಸುಖ ಭೋಗಗಳನ್ನೇ ಅರಸುತ್ತಾ ಅವುಗಳಲ್ಲಿಯೇ ಮುಳುಗಿಹೋಗಿರುತ್ತಾರೆ. ಭೋಗಸಂಪಾದನೆಗಾಗಿ ಅನ್ಯಾಯದಿಂದ

ಹಣವನ್ನು ಗಳಿಸುತ್ತಾರೆ.

''ನಾನೇ ಸ್ವತಂತ್ರನಾದ ಪ್ರಭು, ನಾನು ಬಲಿಷ್ಠ, ನಾನು ಸಿದ್ಧಪುರುಷ - ಎಂದು ತಿಳಿದುಕೊಂಡಿರುತ್ತಾರೆ. ನನಗೆ ಸಮಾನರಾದವರು ಯಾರು? '' ಎಂದುಕೊಂಡಿರುತ್ತಾರೆ. ಈ ಆಸುರಪ್ರಕೃತಿಯವರು ಕಡೆಯಲ್ಲಿ ಸತ್ತು ಘೋರ ನರಕದಲ್ಲಿ ಬೀಳುತ್ತಾರೆ. ಈ ಮೂಢರು ಅಹಂಕಾರ, ಬಲ, ದರ್ಪ, ಕಾಮ, ಕ್ರೋಧಗಳಲ್ಲಿ ತೊಡಗಿ, ತಮ್ಮ ದೇಹದಲ್ಲಿಯೂ ಇತರ ಸರ್ವಜನತೆಯ ಹೃದಯದಲ್ಲಿಯೂ ನೆಲೆಸಿರುವ ಪರಮಾತ್ಮನನ್ನು ಅಲಕ್ಷಿಸುವುದಲ್ಲದೆ ದ್ವೇಷಿಸುತ್ತಲೂ ಕಾಲಕಳೆಯುತ್ತಾರೆ! ''

ಇದು ಶ್ರೀಕೃಷ್ಣ ಪರಮಾತ್ಮನು ಲೋಕಕಲ್ಯಾಣಕ್ಕಾಗಿ ಎಚ್ಚರಿಸಿದ ಪರಿ. ದೇವರಲ್ಲಿಯೂ, ಶಾಸ್ತ್ರೀಯ ಕಾರ್ಯದಲ್ಲಿಯೂ ವಿಶ್ವಾಸವಿಟ್ಟು ಜನರೇ ರಜಸ್ತಮೋಗುಣಗಳ ಪ್ರಾಬಲ್ಯದಿಂದ ದುಷ್ಕೃತ್ಯಗಳನ್ನು ನಡೆಸುತ್ತಿರುವುದು ವಿಚಿತ್ರವೆನಿಸುತ್ತದೆ. ಈ ಜನರು ವಿಪತ್ತಿಗೆ ಒಳಗಾದಾಗ ದೇವರಿಗೆ ಹರಕೆ ಹೊರುತ್ತಾರೆ. ವೈಭವದ ದೇವತಾಪೂಜೆಯನ್ನೂ-ಯಜ್ಞಗಳನ್ನೂ ಮಾಡಿಸುತ್ತಾರೆ. ಅನ್ಯಾಯದಿಂದ ಸಂಪಾದಿಸಿದ ಸಂಪತ್ತಿನಿಂದ ಹಿಗ್ಗುತ್ತಲೇ ತಮ್ಮ ಪಾಪವನ್ನು ತೊಳೆದುಕೊಳ್ಳುವುದಕ್ಕಾಗಿ ತಿರುಪತಿ ವೆಂಕಟೇಶ್ವರ ಸ್ವಾಮಿಯ ಹುಂಡಿಚೀಲಕ್ಕೆ ಕಾಣಿಕೆಗಳನ್ನು ತುರುಕಿ ಬರುತ್ತಾರೆ! ಒಂದು ಕೈಯಲ್ಲಿ ಹೇರಳ ಲಂಚವನ್ನು ಪಡೆದು ಇನ್ನೊಂದು ಕೈಯಿಂದ ಬಡವರಿಗೆ ಕೊಂಚ ಧನಸಹಾಯವನ್ನು ಮಾಡುತ್ತಾರೆ. ಇಂದ್ರಿಯನಿಗ್ರಹದ ಶಕ್ತಿಯಿಲ್ಲದೆ ಮನಸ್ಸು ಡೋಲಾಯಮಾನವಾಗುತ್ತಿರುವುದೇ ಇದಕ್ಕೆ ಕಾರಣ. ಇಂದ್ರಿಯ ನಿಗ್ರಹಶಕ್ತಿ ಇದ್ದವರೂ ಯಾವುದೋ ಜನ್ಮಾಂತರದಲ್ಲಿ ಮಾಡಿದ ಕರ್ಮದ ಒತ್ತಡಕ್ಕೆ ಸಿಕ್ಕಿ ದುಷ್ಕರ್ಮದಲ್ಲಿ ತೊಡಗಿ ಅನರ್ಥಕ್ಕೆ ಒಳಗಾಗುವುದೂ ಉಂಟು. ಈ ವಿರೋಧಾಭಾಸಕ್ಕೆ ಉದಾಹರಣೆಗಳುಂಟು.

ಶ್ರೀಮದ್ರಾಮಾಯಣದ ಯುದ್ಧಕಾಂಡದಲ್ಲಿ ಶ್ರೀರಾಮನಿಂದ ರಾವಣನು ಹತನಾಗುತ್ತಾನೆ. ದುಷ್ಟನಾದ ರಾವಣನಿಂದ ಪರಿತ್ಯಕ್ತನಾದರೂ ವಿಭೀಷಣನು ಸಹಜವಾದ ಸೋದರ ಸ್ನೇಹದಿಂದ ದುಃಖಿತನಾಗಿ, ಸತ್ತು ಮಲಗಿದ್ದ ರಾವಣನ

ದೇಹದ ಬಳಿ ಬಂದು ಶೋಕಿಸುತ್ತಾ ಶ್ರೀರಾಮನಿಗೆ ಹೇಳುತ್ತಾನೆ -

**"ಏಷೋ ಆಹಿತಾಗ್ನಿಶ್ಚ ಮಹಾತಪಾಶ್ಚ**
**ವೇದಾಂತ ಕರ್ಮಸು ಚಾಗ್ರವೀರ್ಯ:॥"**

"ಈತನು ಆಹಿತಾಗ್ನಿಯಾಗಿ ಅಗ್ನಿಹೋತ್ರಾದಿ ವೈದಿಕ ಕಾರ್ಯಗಳನ್ನು ನಡೆಸುತ್ತಿದ್ದನು. ಇವನು ಮಹಾತಪಸ್ವಿ. ವೇದಾಂತದಲ್ಲಿ ನಿಷ್ಣಾತ. ಶ್ರೇಷ್ಠನಾದ ಕರ್ಮನಿಷ್ಠ." ಇದೊಂದು ಆಶ್ಚರ್ಯಕರವಾದ ವಿಷಯವಾಗಿದೆ. ಮಹಾಭಾರತದಲ್ಲಿ ಇಂತಹ ಇನ್ನೊಂದು ಉದಾಹರಣೆ ಸಿಗುತ್ತದೆ. ದುರ್ಯೋದನನು ವಿನಾಕಾರಣ ಪಾಂಡವರಿಗೆ ಎಷ್ಟು ಕಿರುಕುಳವನ್ನು ಕೊಟ್ಟನೆಂದೂ ಎಂತಹ ದುರ್ಬುದ್ಧಿಯವನಾಗಿದ್ದನೆಂದೂ ಎಲ್ಲರೂ ಬಲ್ಲರು. ಅವನು ಒಂದು ಸಂದರ್ಭದಲ್ಲಿ ಹೀಗೆ ಹೇಳುತ್ತಾನೆ -

**"ಜಾನಾಮಿ ಧರ್ಮಂ ನ ಚ ಮೇ ಪ್ರವೃತ್ತಿ:।**
**ಜಾನಾಮ್ಯಧರ್ಮಂ ನ ಚ ಮೇ ನಿವೃತ್ತಿ:॥"**

"ಯಾವುದು ಧರ್ಮವೆಂದು ನನಗೆ ಗೊತ್ತಿದೆ. ಆದರೆ ಧರ್ಮಮಾರ್ಗದಲ್ಲಿ ಹೋಗಲು ನನಗೆ ಪ್ರವೃತ್ತಿಯುಂಟಾಗುವುದಿಲ್ಲ! ಯಾವುದು ಅಧರ್ಮವೆಂದು ನನಗೆ ತಿಳಿಯುತ್ತದೆ. ಆದರೆ ಅದನ್ನು ಬಿಡಲು ಮನಸ್ಸು ಬರುವುದಿಲ್ಲ!" ಈಗ ಇಂತಹ ಜನರೇ ಲೋಕದಲ್ಲಿ ಅಧಿಕವಾಗಿಬಿಟ್ಟಿದ್ದಾರೆ.

ಪ್ರಕೃತದಲ್ಲಿ ಪರಮಾತ್ಮನಿದ್ದಾನೆಂದು ನಿಶ್ಚಯಿಸುವುದಕ್ಕೆ ಆಳವಾದ ತತ್ತ್ವಚಿಂತನೆಯೇ ಮುಖ್ಯಸಾಧನವಾಗಿರುತ್ತದೆ. ಈ ವಿಚಾರವು ತೈತ್ತಿರೀಯದ ಭೃಗೂಪನಿಷತ್ತಿನಲ್ಲಿ ಸ್ಪಷ್ಟವಾಗಿದೆ. ಇದನ್ನು ಉಪನಿಷತ್ತು ಒಂದು ಆಖ್ಯಾಯಿಕೆಯ ಮೂಲಕ ತಿಳಿಸಿಕೊಡುತ್ತದೆ. ವರುಣನ ಪುತ್ರನಾದ ಭೃಗು ಎಂಬವನು ತಂದೆಯ ಬಳಿಗೆ ಹೋಗಿ ವಿನಯದಿಂದ ನಮಸ್ಕರಿಸಿ **"ಅಧೀಹಿ ಭಗವೋ ಬ್ರಹ್ಮ"** ಎಂದು ಪ್ರಾರ್ಥಿಸಿದನು. "ಭಗವನ್, ಬ್ರಹ್ಮಸ್ವರೂಪವನ್ನು ತಿಳಿಸಿಕೊಡು" ಎಂಬುದು ಅದರ

ಅರ್ಥ. ಬ್ರಹ್ಮವೆಂದರೆ ಸಚ್ಚಿದಾನಂದನೆಂದು ಶಾಸ್ತ್ರೀಯವಾದ ಅರ್ಥ. ಪ್ರಕೃತದಲ್ಲಿ 'ಪರಮಾತ್ಮ, ಈಶ್ವರ, ದೇವರು' - ಎಂದಿಟ್ಟುಕೊಳ್ಳಬಹುದು. ಆಗ ವರುಣನು ಬ್ರಹ್ಮದ ಸ್ವರೂಪವನ್ನು ಹೇಳಿದ ಮಾತ್ರಕ್ಕೆ ಅದರ ಪರಿಚಯವಾಗುವುದಿಲ್ಲ. ಮನಸ್ಸಿಗೆ ದೃಢವಾದ ವಿಶ್ವಾಸ ಹುಟ್ಟುವುದೂ ಇಲ್ಲ. ಜಿಜ್ಞಾಸುವಾದವನು ಸ್ವತಃ ವಿಚಾರಮಾಡಿ ಆಳವಾದ ಚಿಂತನೆಯನ್ನು ನಡೆಸಿದರೆ ಮಾತ್ರ ಬ್ರಹ್ಮವಿದೆಯೆಂದೂ ಅದರ ಸ್ವರೂಪವೇನೆಂದೂ ಗೊತ್ತಾಗುವುದು - ಎಂದು ಆಲೋಚಿಸಿ ಹೀಗೆ ಹೇಳುತ್ತಾನೆ - ''ಭೃಗು, ಬ್ರಹ್ಮದ ಸ್ವರೂಪವೇನೆಂದು ನಿನಗೆ ಸರಿಯಾಗಿ ತಿಳಿಯಬೇಕಾದರೆ, ನೀನೇ ಸ್ವತಃ ವಿಚಾರಮಾಡಬೇಕು. ಗಂಭೀರವಾದ ತತ್ತ್ವಚಿಂತನೆಯೇ ತಪಸ್ಸು. ತಪಸ್ಸಿನಿಂದ ತಿಳಿಯಬೇಕಾದ್ದು ಬ್ರಹ್ಮ. ಅನ್ನ, ಪ್ರಾಣ, ಚಕ್ಷುಸ್, ಶ್ರೋತ್ರ, ಮನಸ್ಸು ವಾಕ್ - ಇವು ಬ್ರಹ್ಮನನ್ನು ತಿಳಿಯುವ ಸಾಧನಗಳು. ಹಿರಣ್ಯಗರ್ಭನಿಂದ ಹಿಡಿದು ಸಕಲಜೀವಿಗಳೂ ಯಾವುದರಿಂದ ಜನಿಸುತ್ತವೆಯೋ , ಜನಿಸಿದ ಮೇಲೆ ಯಾವುದರಿಂದ ಜೀವಿಸುತ್ತವೆಯೋ, ಯಾವುದರ ಬಲದಿಂದ ಪ್ರಾಣವನ್ನು ಹಿಡಿದುಕೊಂಡಿವೆಯೋ, ಕಡೆಗೆ ಯಾವುದರಲ್ಲಿ ಲಯವನ್ನು ಹೊಂದಿಬಿಡುತ್ತವೆಯೋ ಮತ್ತು ಉತ್ಪತ್ತಿ, ಸ್ಥಿತಿ, ಲಯ ಕಾಲಗಳಲ್ಲಿ ಯಾವುದರೊಡನೆ ತಾದಾತ್ಮ್ಯವನ್ನು ಹೊಂದಿಯೇ ಇರುತ್ತವೆಯೋ ಅದೇ ಬ್ರಹ್ಮ. ಹೋಗಿ ತಪಸ್ಸು ಮಾಡಿ ನೀನೇ ತಿಳಿದುಕೋ ''ಎಂದುಬಿಡುತ್ತಾನೆ.

ಅನಂತರ, ಭೃಗುವು ಏಕಾಂತದಲ್ಲಿ ಕುಳಿತು ಹಲವು ದಿನಗಳವರೆಗೆ ಚಿಂತಿಸಿ ''ಅನ್ನವೇ ಬ್ರಹ್ಮ'' ಎಂದು ನಿರ್ಣಯಿಸಿಕೊಳ್ಳುತ್ತಾನೆ. ಏಕೆಂದರೆ, ಪ್ರಾಣಿಗಳು ಅನ್ನದಿಂದಲೇ ರೇತಸ್ಸು ಆಗಿ ಹುಟ್ಟುತ್ತಾರೆ. ಅನ್ನದಿಂದಲೇ ಜೀವಿಸುತ್ತಾರೆ. ಕಡೆಗೆ ಸತ್ತಮೇಲೆ ಮಣ್ಣನ್ನು ಸೇರಿ ಮತ್ತೆ ಅನ್ನವಾಗಿಬಿಡುತ್ತಾರೆ. ಆದ್ದರಿಂದ , ಅನ್ನವೇ ಬ್ರಹ್ಮ! - ಹೀಗೆ ನಿಶ್ಚಯಿಸಿ ತಂದೆಯ ಬಳಿಗೆ ಹೋಗಿ ''ಭಗವನ್, ಅನ್ನವೇ ಬ್ರಹ್ಮ'' ಎಂದು ನಿವೇದಿಸುತ್ತಾನೆ. ವರುಣನು ''ಅಲ್ಲ, ಹೋಗು, ಇನ್ನೂ ತಪಸ್ಸು ಮಾಡು'' ಎಂದು ಭೃಗುವನ್ನು ಕಳುಹಿಸುತ್ತಾನೆ. ಭೃಗು ಮತ್ತೆ ತಪಸ್ಸಿನಲ್ಲಿ ತೊಡಗುತ್ತಾನೆ. ಶಾಸ್ತ್ರೋಕ್ತ ನಿಯಮಪೂರ್ವಕವಾಗಿ ತತ್ತ್ವ ಚಿಂತನರೂಪವಾದ ತಪಸ್ಸು ದೀರ್ಘಕಾಲ ನಡೆಯುತ್ತಿತ್ತು.

ಹೀಗೆ, ಆರು ಬಾರಿ ಭೃಗುವು ತಪಸ್ಸು ಮಾಡಿ, ಕಡೆಯಲ್ಲಿ ಬ್ರಹ್ಮ ಸ್ವರೂಪವನ್ನು ಅರಿತುಕೊಂಡನು. ಈ ಉಪನಿಷತ್ತು ತಿಳಿಸುವಂತೆ ನಾಸ್ತಿಕರು ಅನ್ನಬ್ರಹ್ಮವಾದಿಗಳು !

ಆಸ್ತಿಕರೆಂದರೆ ಯಾರು? ನಾಸ್ತಿಕರೆಂದರೆ ಯಾರು? **"ಅಸ್ತಿ ನಾಸ್ತಿ ದಿಷ್ಟಂ ಮತಿಃ"** ಎಂಬ ಪಾಣಿನಿಸೂತ್ರವು (ಅಷ್ಟಾಧ್ಯಾಯೀ - ೪. ೪.೬೦) ಈ ಶಬ್ದಗಳ ವ್ಯುತ್ಪತ್ತಿಯನ್ನು ತಿಳಿಸುತ್ತದೆ. **"ಅಸ್ತಿ ಪರಲೋಕಃ ಇತಿ ಮತಿರ್ಯಸ್ಯ ಸಃ ಆಸ್ತಿಕಃ ನಾಸ್ತಿ ಪರಲೋಕಃ ಇತಿ ಮತಿರ್ಯಸ್ಯ ಸಃ ನಾಸ್ತಿಕಃ "** ಸತ್ತಮೇಲೆ ಪರಲೋಕವಿದೆಯೆಂದು ಒಪ್ಪತಕ್ಕವನು ಆಸ್ತಿಕ. ಇಲ್ಲವೆನ್ನುವವನು ನಾಸ್ತಿಕ. ದೈಷ್ಟಿಕ ಎಂದರೆ ಅದೃಷ್ಟವನ್ನು ನಂಬತಕ್ಕವನು. ದೇವರ ವಿಷಯ ಇಲ್ಲಿ ಬಂದಿಲ್ಲ. ಪರಲೋಕ ಎಂದು ಸೇರಿಸಿಕೊಂಡವರು ವ್ಯಾಖ್ಯಾನಕಾರರು. ಸಾಂಖ್ಯರೂ, ಮೀಮಾಂಸಕರೂ ತಮ್ಮ ಒಂದು ಪ್ರಕ್ರಿಯೆಗೋಸ್ಕರ ದೇವರನ್ನು ಒಪ್ಪದಿದ್ದರೂ ಜೀವಾತ್ಮನನ್ನೂ, ಪರಲೋಕವನ್ನೂ ಒಪ್ಪುತ್ತಾರೆ. ಇವರ ಪ್ರಕಾರ ಧರ್ಮಾಧರ್ಮಗಳೂ, ಪುಣ್ಯ ಪಾಪಗಳೂ ಇವೆ. ಇವರು ವೇದಪ್ರಾಮಾಣ್ಯವನ್ನು ಅಂಗೀಕರಿಸುವುದರಿಂದ ಆಸ್ತಿಕರು. ಯೋಗಿಗಳೂ ವೇದಾಂತಿಗಳೂ ದೇವರನ್ನೂ , ಪರಲೋಕವನ್ನೂ , ಜೀವಾತ್ಮನನ್ನೂ ಅಂಗೀಕರಿಸುವುದರಿಂದ ಇವರು ಆಸ್ತಿಕರೆಂಬುದು ಸ್ಪಷ್ಟವಾಗಿದೆ.

ವೇದಪ್ರಾಮಾಣ್ಯವನ್ನು ಒಪ್ಪದಿದ್ದರೂ ಜೀವಾತ್ಮರನ್ನು ಧರ್ಮಾಧರ್ಮಗಳನ್ನು ಅಂಗೀಕರಿಸುವ ಜೈನರನ್ನು ಆಸ್ತಿಕರೆಂದೇ ಹೇಳುವುದು ಯುಕ್ತ. ಪುನರ್ಜನ್ಮವನ್ನೊಪ್ಪುವ ಜೈನರೂ ಸಹ ಒಂದು ದೃಷ್ಟಿಯಿಂದ ಆಸ್ತಿಕರೇ. ಬೌದ್ಧರಲ್ಲಿ ಶೂನ್ಯವಾದಿಗಳಾದ ಮಾಧ್ಯಮಿಕರು ಮಾತ್ರ ನಾಸ್ತಿಕರೆನ್ನುವುದು ಯುಕ್ತವೆಂದು ತೋರುತ್ತದೆ. ಪ್ರಕೃತದಲ್ಲಿ ಜೀವಾತ್ಮ, ಪರಮಾತ್ಮ, ಪುನರ್ಜನ್ಮಗಳನ್ನು ಒಪ್ಪದವರನ್ನು ನಾಸ್ತಿಕರೆಂದು ಭಾವಿಸಲಾಗಿದೆ. ಇವರೇ ಚಾರ್ವಾಕರು. ಲೋಕಾಯತರೆಂದು ತಿಳಿಯಬೇಕು. ಚಾರ್ವಾಕರ ಈ ನಾಸ್ತಿಕವಾದವು ಕೇವಲ ವಾಗಾಡಂಬರವೇ ಹೊರತು ವಿಚಾರಶೀಲರು ಒಪ್ಪಬಹುದಾದ ಯಾವ ಯುಕ್ತಿಯೂ ಇದಕ್ಕಿಲ್ಲ. ಇವರ ವಾದಕ್ಕೆ ಮೊಂಡುತನ ಒಂದೇ ಆಧಾರ. ವೇದಾದಿಪ್ರಮಾಣ ಗ್ರಂಥಗಳ ಆಧಾರ ಒತ್ತಟ್ಟಿಗಿರಲಿ,

ಕಾರ್ಯಕಾರಣಭಾವವೆಂಬ ನ್ಯಾಯವು ವಸ್ತುಸಿದ್ಧಿಗೆ ಈ ಜಗತ್ತಿನಲ್ಲಿ ಸಮಸ್ತ ವಿವೇಕಶಾಲಿಗಳೂ ಅಂಗೀಕರಿಸಿರುವ ಯುಕ್ತಿಯಾಗಿದೆ.

ಕಾರ್ಯ (effect) ಇದ್ದರೆ ಅದಕ್ಕೊಂದು ಕಾರಣ (cause) ಇರಲೇಬೇಕು. ಆದರೆ ಕಾರಣವಿದ್ದಾಗ ಕಾರ್ಯವು ಹುಟ್ಟಲೇಬೇಕೆಂಬ ನಿಯಮವಿಲ್ಲ. ಬೀಜವಿದ್ದರೂ ಮರವು ಹುಟ್ಟದಿರಬಹುದು. ಮರವಿದ್ದರೆ ಮಾತ್ರ ಅದಕ್ಕೊಂದು ಬೀಜವಿರಲೇಬೇಕು. ನಾನಾ ವೈಶಿಷ್ಟ್ಯಗಳಿಂದ ಕೂಡಿದ ಈ ವಿಚಿತ್ರ ವಿಶ್ವದಲ್ಲಿರುವ ಸ್ಥಾವರಜಂಗಮಗಳೆಂಬ ವಸ್ತುಗಳೆಲ್ಲವೂ ಕಾರ್ಯಗಳು. ಇವು ಹುಟ್ಟುತ್ತವೆ. ಕೆಲವು ಕಾಲ ಇರುತ್ತವೆ. ರೂಪಾಂತರಗಳನ್ನು ಧರಿಸುತ್ತವೆ. ಬೆಳೆಯುತ್ತವೆ. ಕ್ಷಯಿಸುತ್ತವೆ. ಕಡೆಗೆ ನಾಶ ಹೊಂದುತ್ತವೆ. ಹೀಗೆ ನಾನಾ ವಿಕಾರಗಳನ್ನು ಪಡೆಯುತ್ತಾ ಹುಟ್ಟಿ ಸಾಯುವ ಪದಾರ್ಥಗಳು ಕಾರ್ಯಗಳು. ಇವುಗಳಿಗೆ ಕಾರಣ ಯಾವುದು? ಮಾನವನಿಂದ ಊಹಿಸಲೂ ಶಕ್ಯವಿಲ್ಲದಷ್ಟು ಅದ್ಭುತವಾದ ಮಾನವ ದೇಹಯಂತ್ರದ ಶಿಲ್ಪಿ ಯಾರು? ಎಷ್ಟೋ ಕೋಟಿ ವರ್ಷಗಳಿಂದ ಒಂದೇ ಸಮನೆ ಉರಿಯುತ್ತಿರುವ ಸೂರ್ಯ ಮಂಡಲಕ್ಕೆ ಇಂಧನವನ್ನು ಒದಗಿಸುವವರು ಯಾರು? ಬೇಸಿಗೆ, ಚಳಿಗಾಲ, ಮಳೆಗಾಲ - ಮುಂತಾದ ಕಾಲ ಚಕ್ರವನ್ನು ವ್ಯವಸ್ಥಿತವಾಗಿ ನಡೆಸುವ ವ್ಯವಸ್ಥಾಪಕನು ಯಾರು? ಈ ಜಗತ್ತಿನ ಆಕಾರವನ್ನು ರೂಪಿಸಿ plan ಬರೆದುಕೊಟ್ಟವರೂ, ಇದನ್ನು ಕಾರ್ಯಗತಗೊಳಿಸಿದ ಇಂಜಿನೀಯರ್ ಸಹ ಯಾರು? ಇದೆಲ್ಲವೂ ಸ್ವಭಾವ ಸಿದ್ಧವಾಗಿ ನಡೆಯುತ್ತಿದೆ ಎಂದು ಹೇಳುವುದಾದರೆ, ''ಎಲೈ ನಾಸ್ತಿಕ, ತೊಲಗು ಆಚೆಗೆ'' ಎಂದು ಹೇಳಬೇಕಾಗುತ್ತದೆ. ಈ ಚಾರ್ವಾಕರೊಂದಿಗೆ ವಾದ ಮಾಡುವುದು ಬರಿಯ ಮರಳಿನಿಂದ ಮನೆಕಟ್ಟುವ ಪ್ರಯತ್ನದಂತೆ ವ್ಯರ್ಥವೇ ಸರಿ. ಕುತೂಹಲಿಗಳು ಈ ಪುಸ್ತಕದ ೨ ಮತ್ತು ೩ ನೇ ಪ್ರಕರಣಗಳನ್ನು ನೋಡಬಹುದು.

ಈ ಕನ್ನಡನಾಡು ಕಂಡ ಮಹಾಮೇಧಾವಿಗಳೂ, ಸಮಾಜ ಹಿತಕ್ಕಾಗಿ ಸದಾ ಚಿಂತಿಸುತ್ತಾ ಅದರ ಒಳಿತಿಗಾಗಿ ತುಂಬಾ ಶ್ರಮಿಸಿದ ದಾರ್ಶನಿಕರೂ ಆಗಿದ್ದ ಡಾ।। ಡಿ. ವಿ. ಗುಂಡಪ್ಪನವರ ಕಗ್ಗಗಳಿಂದ ಆರಿಸಿದ ಎರಡು ಪದ್ಯಗಳನ್ನಿಲ್ಲಿ

ಉದಾಹರಿಸಬಹುದು.

**"ನಂಬು ನೀಂ ದೈವವನು ನಂಬು ಸ್ವಯಂಭುವನು**
**ನಂಬು ಸಾಂಬನ ಮನದಿ ತುಂಬು ಭಕ್ತಿಯನು।**
**ಬಿಂಬವೋ ಕಂಬವೋ ನಂಬಿಕೆಯ ಮಾತ್ರದಿಂ**
**ದಿಂಬುಗೊಳುವುದು ಜೀವ ಮರುಳಮುನಿಯ॥"**

**ನಂಬದಿರ್ದನು ತಂದೆ ನಂಬಿದನು ಪ್ರಹ್ಲಾದ**
**ನಂಬಿಯೂ ನಂಬದಿಹ ಇಬ್ಬಂದಿ ನೀನು।**
**ಕಂಬದಿನೊ ಬಿಂಬದಿನೊ ಮೋಕ್ಷವವರಿಂಗಾಯ್ತು**
**ಸಿಂಬಳದ ನೊಣ ನೀನು ! ಮಂಕುತಿಮ್ಮ॥"**

ದೇವರಿಲ್ಲವೆನ್ನುವ ನಾಸ್ತಿಕರಿಗೆ ಭಗವದ್ಗೀತೆಯ ಉಪದೇಶವು ರುಚಿಸುವುದಿಲ್ಲ. ಶ್ರೀಕೃಷ್ಣನು ಅವತಾರಪುರುಷನೆಂದೂ, ವೇದವ್ಯಾಸರು ಜ್ಞಾನಿಗಳಾದ ಮಹರ್ಷಿಗಳೆಂದೂ ಯಾರಿಗೆ ವಿಶ್ವಾಸವಿಲ್ಲವೋ ಅವರಿಗೆ ಕರ್ಮಯೋಗ, ಭಕ್ತಿಯೋಗ, ಜ್ಞಾನಯೋಗ ಮುಂತಾದ ನುಡಿಗಳು ಅರ್ಥವಿಲ್ಲದ ಶಬ್ದಗಳಾಗಿ ಪರಿಣಮಿಸುತ್ತವೆ. ಆದ್ದರಿಂದ, ಆಸ್ತಿಕತೆಯ ತಳಹದಿಯನ್ನು ಭದ್ರಪಡಿಸುವುದಕ್ಕಾಗಿ ಈ ಪುಸ್ತಕದಲ್ಲಿ ಕೆಲವು ವಿಚಾರಗಳನ್ನು ಬರೆದು ವಾಚಕರ ಮನಸ್ಸಿನಲ್ಲಿರಬಹುದಾದ ಗೊಂದಲವನ್ನು ಹೋಗಲಾಡಿಸಿ ಶಾಂತಸ್ಥಿತಿಗೆ ತರಲು ಪ್ರಯತ್ನಿಸಲಾಯಿತು. ಈಗ ಭಗವದ್ಗೀತೆಯ ಉಪದೇಶದ ಸಾರವನ್ನು ಸಂಗ್ರಹಿಸಿ, ಆ ಗ್ರಂಥದಲ್ಲಿ ಅಧಿಕವಾದ ಆಸಕ್ತಿಯನ್ನು ಹುಟ್ಟಿಸಲು ಯತ್ನಿಸಬೇಕಾಗಿದೆ.

ಮನುಷ್ಯನಾಗಿ ಹುಟ್ಟಿದವನು ಸಾಧಿಸಬೇಕಾದ ಗುರಿಗಳು ನಾಲ್ಕು - ಧರ್ಮ, ಅರ್ಥ, ಕಾಮ, ಮೋಕ್ಷ. ಈ ನಾಲ್ಕನ್ನು ಪುರುಷಾರ್ಥಗಳೆನ್ನುತ್ತಾರೆ. ಇವುಗಳಲ್ಲಿ ಅರ್ಥ, ಕಾಮಗಳು ನಾಸ್ತಿಕರ ಗುರಿಗಳೂ ಹೌದು. ಧರ್ಮ, ಮೋಕ್ಷಗಳನ್ನು ಅವರು ಒಪ್ಪುವುದಿಲ್ಲ. ಇವೆರಡು ಮಾರ್ಗಗಳಿಗೂ ಆಧಾರಸ್ತಂಭವಾಗಿರುವುದೇ ಆತ್ಮ. ದೇಹಾತಿರಿಕ್ತ ಆತ್ಮನನ್ನು ನಾಸ್ತಿಕರು ಒಪ್ಪುವುದಿಲ್ಲ. ಯಾಸ್ಕಮುನಿಗಳು ನಿರುಕ್ತದಲಿ **"ಶ್ರತ್ = ಸತ್ಯಂ ದದಾತಿ ಯಾ**

**ಸಾ ಶ್ರದ್ಧಾ''** ಎಂದು ಶ್ರದ್ಧಾಶಬ್ದದ ನಿರುಕ್ತಿಯನ್ನು ಹೇಳಿದ್ದಾರೆ. ಶ್ರದ್ಧಾ ಎಂದರೆ ಸತ್ಯಾನ್ವೇಷಣೆಯ ಮಾರ್ಗ ಎಂದರ್ಥ. ಶಾಸ್ತ್ರದಲ್ಲಿಯೂ ಗುರುವಿನಲ್ಲಿಯೂ ಇಟ್ಟಿರುವ ಅಚಲವಾದ ನಂಬಿಕೆಯೇ ಅದು. ಏವಂ ಚ ಆತ್ಮನಿದ್ದಾನೆಂದು ಯಾರಿಗೆ ಅಚಲವಾದ ವಿಶ್ವಾಸವಿದೆಯೋ ಅಂತಹ ಆಸ್ತಿಕರಿಗೆ ಧರ್ಮ, ಮೋಕ್ಷಗಳೂ ಜೀವನದ ಗುರಿ. ಧರ್ಮವು ಉಳಿದ ಮೂರೂ ಪುರುಷಾರ್ಥಗಳಿಗೂ ಸಾಧನ ಮಾರ್ಗವಾದ್ದರಿಂದ ಅದೂ ಪುರುಷಾರ್ಥವೆನಿಸಿದೆ.

ಧರ್ಮದಿಂದಲೇ ಅರ್ಥ ಕಾಮಗಳನ್ನು ಸಾಧಿಸಿ ಭೋಗಿಸು, ಮೋಕ್ಷವೇ ಸಾಧಿಸಬೇಕಾದ ಪರಮ ಲಕ್ಷ್ಯವಾಗಿರಲಿ - ಎಂದು ಭಗವದ್ಗೀತೆಯು ಉಪದೇಶಿಸುತ್ತದೆ. ಇಲ್ಲಿ ಕಾಮವೆಂದರೆ ನಮ್ಮ ಇಂದ್ರಿಯಗಳ ಮೂಲಕ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳಿಂದ ಆಗುವ ಎಲ್ಲ ಬಗೆಯ ಸುಖೋಪಭೋಗ. ಈ ಉಪಭೋಗಗಳಿಗೆ ಬೇಕಾದ ವಿಷಯ ಸಾಮಗ್ರಿಯೇ ಅರ್ಥ. ಅದೆಲ್ಲವೂ ಹಣದಿಂದ ದೊರೆಯುವುದರಿಂದ ಹಣವನ್ನೇ ಅರ್ಥವೆಂದು ತಿಳಿಯಬಹುದು. ಈ ಅರ್ಥವನ್ನು ಧರ್ಮದಿಂದಲೇ ಸಂಪಾದಿಸಿ ಧರ್ಮ ಮಾರ್ಗದಿಂದಲೇ ಭೋಗಿಸಬೇಕೆಂದು ಗೀತೆಯು ಬೋಧಿಸುತ್ತದೆ. ಮೋಕ್ಷವೆಂಬುದು ಸಾಮಾನ್ಯ ಜನರಿಗೆ ಅರ್ಥವಾಗುವುದಿಲ್ಲವಾದ್ದರಿಂದ ಅದರ ವಿಚಾರ ಸದ್ಯಕ್ಕೆ ಬೇಡ.

ಧರ್ಮದಲ್ಲಿ ಪ್ರವೃತ್ತಿಮಾರ್ಗ, ನಿವೃತ್ತಿಮಾರ್ಗ ಎಂದು ಎರಡು ಭೇದಗಳಿವೆ. ಅರ್ಥ ಕಾಮಗಳನ್ನು ಬಯಸುವ ಲೌಕಿಕ ಜನರಿಗೆ ಪ್ರವೃತ್ತಿಮಾರ್ಗ. ಇಂತಹ ಜನರೇ ಲೋಕದಲ್ಲಿ ಅಧಿಕವಾಗಿರುತ್ತಾರೆ. ಮೋಕ್ಷಾಪೇಕ್ಷಿಗಳಾದ ವಿರಕ್ತರಿಗೆ ನಿವೃತ್ತಿಮಾರ್ಗ. ಆದರೆ ಇಹಪರಗಳಲ್ಲಿ ಶ್ರೇಯಸ್ಸು ಬಯಸತಕ್ಕ ಲೌಕಿಕರೂ ಇರುತ್ತಾರಷ್ಟೇ. ಅಂಥವರು ಹೇಗೆ ನಡೆದುಕೊಳ್ಳಬೇಕು, ಅದರ ನೀತಿ ನಿಯಮಾವಳಿಗಳು ಹೇಗಿರಬೇಕು - ಎಂಬುದನ್ನು ಗೀತೆಯು ತಿಳಿಸಿಕೊಡುತ್ತದೆ. ಮನುಷ್ಯ ಸಮಾಜಜೀವಿಯಾದ್ದರಿಂದ ಸಮಾಜದಿಂದ ಆತನಿಗೂ ಮತ್ತು ಆತನಿಂದ ಸಮಾಜಕ್ಕೂ ಉಪಕಾರವಾಗಬೇಕೇ ಹೊರತು ಅಪಕಾರವಾಗಬಾರದು. ಪರಲೋಕವನ್ನು ನಂಬಿದ ಆಸ್ತಿಕನು ಇಹದಲ್ಲಿ

ಮಾತ್ರವಲ್ಲ, ಪರದಲ್ಲಿಯೂ ಶ್ರೇಯಸ್ಸನ್ನು ಬಯಸುತ್ತಾನೆ. ಆದ್ದರಿಂದಲೇ, ಮೃತರಾದವರಿಗೆ ಶಾಂತಿಯನ್ನು ಕೋರುವ ಪ್ರವೃತ್ತಿಯೂ, ಪದ್ಧತಿಯೂ ಸಮಾಜದಲ್ಲಿ ಬಂದಿದೆ. ಅದೊಂದು ಸಂಸ್ಕೃತಿಯಾಗಿ ಪರಿಣಮಿಸಿದೆ. ಸರ್ವರಿಗೂ ಶ್ರೇಯಸ್ಸನ್ನು ಬಯಸುತ್ತಾ, ಅನ್ಯರಿಗೆ ಆದರ್ಶಪ್ರಾಯವಾದ ಜೀವನವನ್ನು ನಡೆಸುವುದು ಸನ್ಮಾರ್ಗ, ಸೌಜನ್ಯ, ಸಂಸ್ಕೃತಿ. ಈ ದಿಶೆಯಲ್ಲಿ ಭಗವಾನ್ ಶ್ರೀಕೃಷ್ಣನು ಗೀತೆಯಲ್ಲಿ ಅರ್ಜುನನನ್ನು ಉದ್ದೇಶಿಸಿ ಸಮಸ್ತ ಮಾನವರಿಗೆ ಉಪದೇಶಿಸಿರುವ ಧರ್ಮಾಧರ್ಮ ಯಾವುದೆಂಬುದನ್ನು ನೋಡೋಣ.

ತನ್ನ ಜೀವನಕ್ಕಾಗಿಯೂ ಸಮಾಜದ ಹಿತಕ್ಕಾಗಿಯೂ ಮಾಡುವ ಒಳ್ಳೆಯ ಕಾರ್ಯಗಳೆಲ್ಲವೂ ಕರ್ಮಗಳೇ. ಹಾಗೆಯೇ ಶಾಸ್ತ್ರೋಕ್ತವಾದ ಆಚರಣೆಗಳೂ ಕರ್ಮಗಳು. ಇವೆಲ್ಲವನ್ನೂ ಫಲಾಪೇಕ್ಷೆ ಇಲ್ಲದೆ ಆಚರಿಸಬೇಕೆಂದು ಶ್ರೀಕೃಷ್ಣನ ಉಪದೇಶ. ಫಲಾಪೇಕ್ಷೆಯಿಲ್ಲದೆ ಕರ್ಮವನ್ನು ಯಾರು ಮಾಡುತ್ತಾರೆ? ಅದು ಹೇಗೆ ಸಾಧ್ಯ? ಎಂದು ಕೇಳಬಹುದು. ಹೌದು, ಲೋಕದಲ್ಲಿ ಜನರು ಹಾಗೆ ಮಾಡುತ್ತಿಲ್ಲ. ಆದರೆ, ಫಲಾಪೇಕ್ಷೆ ಇಲ್ಲದೆ ತನ್ನ ಕರ್ತವ್ಯವೆಂದು ತಿಳಿದು ಕರ್ಮವನ್ನಾಚರಿಸುತ್ತಿರಬೇಕು. ಅದು ಸಾಧ್ಯ ಎಂದು ತಿಳಿಸುವುದೇ ಗೀತೆಯ ವೈಶಿಷ್ಟ್ಯವಾಗಿದೆ. ಸ್ವಾರ್ಥವೇ ಫಲ. ಪರಾರ್ಥವಾಗಿ ದುಡಿಯುವ ಸಜ್ಜನರಿಲ್ಲವೆ? ಇದ್ದಾರೆ. ಪರಾರ್ಥವಾದ ಕರ್ಮವೆಲ್ಲವೂ ನಿಷ್ಕಾಮ ಕರ್ಮ. ಪರಮಾತ್ಮನು ಸಂಪ್ರೀತನಾಗಲಿ ಎಂಬ ಒಂದು ಉದ್ದೇಶವು ಅದರಲ್ಲಿರಬಹುದು. ಪರಮಾತ್ಮನಿಗಾಗುವ ಪ್ರೀತಿ, ಹರ್ಷ ಕರ್ತೃವಿನ ಸ್ವಾರ್ಥವಲ್ಲ. ಶಾಸ್ತ್ರೀಯ ಕರ್ಮವನ್ನಾರಂಭಿಸುವಾಗ **''ಶ್ರೀಪರಮೇಶ್ವರಃ ಪ್ರೀಯತಾಮ್''** ಎಂದು ಸಂಕಲ್ಪ ಮಾಡುತ್ತಾರೆ. ಅದು ಯುಕ್ತವಾದ ಮಾರ್ಗ. **''ಧರ್ಮಾರ್ಥಕಾಮಮೋಕ್ಷಸಿದ್ಧ್ಯರ್ಥಮ್''** ಎಂದು ಸಂಕಲ್ಪದಲ್ಲಿ ಸೇರಿಸಿದರೆ ಸ್ವಾರ್ಥವಾಗಿಬಿಡುತ್ತದೆ. ಅಂತಹ ಆಚರಣೆ ನಿಷ್ಕಾಮಕರ್ಮವಲ್ಲ. ನಿಷ್ಕಾಮಕರ್ಮಕ್ಕೆ ದೃಷ್ಟಾಂತವಾಗಿ ಶ್ರೀಕೃಷ್ಣನು ತನ್ನ ಕಾರ್ಯಮಾರ್ಗವನ್ನೇ ಉದಾಹರಿಸಿದ್ದಾನೆ.

**''ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ।**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ॥''**(೩.೨೨)

''ಪಾರ್ಥ, ಮೂರು ಲೋಕಗಳಲ್ಲಿಯೂ ನಾನು ಮಾಡಬೇಕಾದ ಕರ್ಮ ಯಾವುದೂ ಇಲ್ಲ. ಏಕೆಂದರೆ, ನನಗೆ ದೊರಕದಿರುವ ಯಾವುದನ್ನೂ ನಾನು ಪಡೆಯಬೇಕಾಗಿಲ್ಲ. ಎಲ್ಲವೂ ನನಗೆ ಪ್ರಾಪ್ತವಾದದ್ದೆ. ಆದರೂ, ನಾನು ಕರ್ಮದಲ್ಲಿ ತೊಡಗಿರುತ್ತೇನೆ''.

ಶ್ರೀಕೃಷ್ಣನ ಚರಿತೆಯನ್ನವಲೋಕಿಸಿದರೆ ಇದೆಲ್ಲವೂ ಸ್ಪಷ್ಟವಾಗುತ್ತದೆ. ಅವನು ಮಾಡಿದ ಪ್ರತಿಯೊಂದು ಕೆಲಸವೂ ಪರಾರ್ಥವಾಗಿಯೇ ಇತ್ತು. ಬಾಲ್ಯದಲ್ಲಿ ಕೊಳಲೂದುತ್ತಿದ್ದುದು ಗೋಪಿಯರ ಮನೋರಂಜನೆಗಾಗಿ. ಆತನಲ್ಲಿ ಕಾಮುಕತೆಯನ್ನು ಹೇಳಿರುವುದು ಕವಿಕಲ್ಪನೆ. ಮಿಥ್ಯಾರೋಪ. ಚಿಕ್ಕ ಬಾಲಕನಲ್ಲಿ ಸ್ತ್ರೀಕಾಮನೆ ಇರುತ್ತದೆಯೆ? ಗೋಪಿಯರಾದರೂ ಸಾಮೂಹಿಕವಾಗಿ ಒಬ್ಬ ಬಾಲಕನನ್ನು ಕಾಮಿಸುತ್ತಿದ್ದರೆ? ಕಂಸವಧೆಗಾಗಿ ಮಧುರೆಗೆ ಹೋದಮೇಲೆ ಶ್ರೀಕೃಷ್ಣನು ಮತ್ತೆ ನಂದಗೋಕುಲದ ಕಡೆಗೆ ತಿರುಗಿಯೂ ನೋಡಲಿಲ್ಲ. ಒಬ್ಬ ಗೋಪಿಯನ್ನೂ ಸ್ಮರಿಸಲಿಲ್ಲ.

**''ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ॥''**( ಗೀತಾ ೨.೪೭)

''ಅರ್ಜುನ, ನಿನಗೆ ಕರ್ಮವನ್ನು ಮಾಡಲು ಮಾತ್ರ ಅಧಿಕಾರವಿರಲಿ. ಅದರ ಫಲದಲ್ಲಿ ಮಾತ್ರ ಬೇಡ.''

ಇದೇ ನಿಷ್ಕಾಮ ಕರ್ಮ. ಶ್ರೇಯಸ್ಸನ್ನು ಬಯಸತಕ್ಕವರು ಸ್ವಾರ್ಥವನ್ನು ತ್ಯಜಿಸಿ ಈಶ್ವರಾರ್ಪಣ ಬುದ್ಧಿಯಿಂದ ಜೀವನಾರ್ಥವಾದ ಕರ್ಮವನ್ನೂ, ಸಮಾಜಕ್ಕೆ ಹಿತಕರವಾದ ಕರ್ಮವನ್ನೂ, ಶಾಸ್ತ್ರೋಕ್ತವಾದ ಆಚರಣೆಯನ್ನೂ, ಶ್ರೀಕೃಷ್ಣಾರ್ಪಣವೆಂಬ ಬುದ್ಧಿಯಿಂದ ನಡೆಸುತ್ತಲೇ ಇರಬೇಕೆಂದು ಶ್ರೀಕೃಷ್ಣನ ಉಪದೇಶವಾಗಿದೆ. ಈ ನಿಷ್ಕಾಮಕರ್ಮದಿಂದ ಮೊದಲು ತಾನಾಗಿ ಆಗುವ ಪ್ರಯೋಜನವೆಂದರೆ - ಚಿತ್ತಶುದ್ಧಿ. ರಜೋಗುಣ ತಮೋಗುಣಗಳಿಂದ ಚಿತ್ತದಲ್ಲುಂಟಾದ ಮಲಿನ ಸಂಸ್ಕಾರದ ನಾಶವೇ ಚಿತ್ತಶುದ್ಧಿ. ಆಗ, ಕಾಮಕ್ರೋಧಾದಿಗಳು ಕ್ಷಯಿಸುತ್ತವೆ.

ಆಗ ಸಂಭವಿಸುವ ನಿವೃತ್ತಿ ಮಾರ್ಗವು ಫಲಿಸಿ ಆತ್ಮಜ್ಞಾನ ಉಂಟಾಗಿ ಮನುಷ್ಯನು ಕೃತಕೃತ್ಯನಾಗುತ್ತಾನೆ. ತಪ್ಪುದಾರಿಗಳಿಂದ ಜನರಿಗೆ ಸನ್ಮಾರ್ಗವನ್ನು ತೋರಿಸಿಕೊಡುವುದಕ್ಕೆ ಲೋಕ ಸಂಗ್ರಹವೆಂದು ಹೆಸರು. ಈ ಲೋಕ ಸಂಗ್ರಹಕ್ಕಾಗಿ ಆತ್ಮಜ್ಞಾನಿಯೂ ಕರ್ಮಾಚರಣೆಯಲ್ಲಿ ತೊಡಗಿರಬಹುದು.

ಜ್ಞಾನಿಗೆ ಕರ್ಮಾಚರಣೆಯಿಂದ ಯಾವ ಸಂಸಾರ ಬಂಧನವೂ ಆಗುವುದಿಲ್ಲ. ಏಕೆಂದರೆ, ಅವನಿಗೆ ಕರ್ಮಫಲದಲ್ಲಿ ಆಸೆ ಇರುವುದಿಲ್ಲ. ಕರ್ಮಫಲದ ಆಸೆಯೇ ಬಂಧಕ. ಲೋಕಸಂಗ್ರಹಕ್ಕಾಗಿ ಈ ದೇಹವೂ, ಇಂದ್ರಿಯಗಳೂ ಕೆಲಸ ಮಾಡುತ್ತವೆ. ದೇಹಾತಿರಿಕ್ತನಾದ ನಾನು ಯಾವ ಕೆಲಸವನ್ನೂ ಮಾಡುತ್ತಿಲ್ಲ - ಎಂದು ಆತನು ತಿಳಿದಿರುತ್ತಾನೆ. ದೇಹದ ಸ್ಥಿತಿಗಾಗಿ ಜ್ಞಾನಿಯು ಆಹಾರವನ್ನು ಸ್ವೀಕರಿಸುತ್ತಾ ಮಾರ್ಗದರ್ಶನಕ್ಕಾಗಿ ಎಲ್ಲರಂತೆ ವ್ಯವಹರಿಸುತ್ತಾನೆ. ಇದೇ ಲೋಕಸಂಗ್ರಹ.

ಶ್ರೇಯಸ್ಸನ್ನು ಬಯಸತಕ್ಕವನು ಪ್ರತಿದಿನವೂ ಧ್ಯಾನಕ್ಕಾಗಿ ಕೆಲವು ಸಮಯವನ್ನು ಮೀಸಲಾಗಿಡಬೇಕು. ಏಕಾಂತದಲ್ಲಿ ಸ್ಥಿರಾಸನದಲ್ಲಿ ಅಲ್ಲಾಡದೇ ಕುಳಿತು ಪರಮಾತ್ಮನನ್ನು ಧ್ಯಾನಿಸುತ್ತಿರಬೇಕು. ಇನ್ನೊಂದನ್ನು ಸ್ಮರಿಸಬಾರದು. ಮೊದಮೊದಲು ಮನಸ್ಸು ಹತೋಟಿಯಲ್ಲಿಡುವುದು ಕಷ್ಟವಾದರೂ ತಪ್ಪದೆ ಪ್ರಯತ್ನ ಮಾಡುತ್ತಿದ್ದರೆ ಮನಸ್ಸು ವಶವಾಗುತ್ತದೆ. ಪ್ರಯತ್ನಿಸಿದರೆ ಮನುಷ್ಯನಿಗೆ ಅಶಕ್ಯವಾದದ್ದು ಯಾವುದೂ ಇಲ್ಲ. ಗೃಹಸಂಬಂಧಿಗಳಾದ ಸುಖ-ದುಃಖಗಳ ಕಡೆಗೆ ಹರಿಯುವ ಮನಸ್ಸನ್ನು ಎಳೆದು ಭಗವಂತನ ಕಡೆಗೆ ತಿರುಗಿಸುತ್ತಿದ್ದರೆ ಧ್ಯಾನ ಯೋಗ ಪ್ರತಿಯೊಬ್ಬರಿಗೂ ಸಿದ್ಧಿಸುತ್ತದೆ. ಈ ಸ್ಥಿತಿಯಲ್ಲಿ ಪ್ರಯತ್ನಿಸುತ್ತಿರುವಾಗ ಆಕಸ್ಮಾತ್ ಸಾವು ಬಂದರೂ ಚಿಂತಿಸಬೇಕಾಗಿಲ್ಲ. ಆತನಿಗೆ ಮುಂದಿನ ಜನ್ಮದಲ್ಲಿ ಇನ್ನೂ ಉತ್ತಮವಾದ ಜೀವನ ಪರಿಸ್ಥಿತಿ ದೊರೆಯುತ್ತದೆ. ಆ ಜನ್ಮದಲ್ಲಿ ಇನ್ನೂ ಸುಲಭವಾಗಿ ಜ್ಞಾನಯೋಗದಲ್ಲಿ ತೊಡಗಿ ಅದನ್ನು ಮುಂದುವರಿಸುತ್ತಾನೆ. ಕಲ್ಯಾಣ ಮಾರ್ಗವನ್ನನುಸರಿಸತಕ್ಕವರ ಪ್ರಯತ್ನವು ಎಂದಿಗೂ ವ್ಯರ್ಥವಾಗುವುದಿಲ್ಲ - ಎಂದು ಶ್ರೀಕೃಷ್ಣನು ಭರವಸೆಯಿತ್ತಿದ್ದಾನೆ.

ಸತ್ತ್ವರಜಸ್ತಮೋಗುಣಗಳು ಪ್ರತಿಯೊಬ್ಬರಲ್ಲಿಯೂ ಇರುತ್ತವೆ. ಇವುಗಳ

ತರತಮಭಾವದಿಂದ ಜನರ ಸ್ವಭಾವಗಳು ನಾನಾ ರೀತಿಯವಾಗಿಬಿಡುತ್ತವೆ. ಇದಕ್ಕನುಗುಣವಾಗಿ ದೈವಭಕ್ತರು ಆರ್ತ, ಅರ್ಥಾರ್ಥಿ, ಜಿಜ್ಞಾಸು, ಜ್ಞಾನಿ - ಎಂದು ವಿಂಗಡಿಸಬಹುದು. ಆರ್ತ ಎಂದರೆ ಆಪತ್ತು ಬಂದಾಗ ದೇವರನ್ನು ಮೊರೆಹೊಕ್ಕು ಭಜಿಸಿ ಪೂಜಿಸತಕ್ಕವನು. ಇವನಲ್ಲಿ ಸತ್ವಗುಣವು ಉಳಿದ ಭಕ್ತರಲ್ಲಿ ಇರುವುದಕ್ಕಿಂತ ಕಡಿಮೆ ಪ್ರಮಾಣದಲ್ಲಿರುತ್ತದೆ. ಹಲವು ಬಗೆಯ ಇಷ್ಟಾರ್ಥಗಳನ್ನು ಬಯಸಿ ಭಕ್ತನಾಗಿರತಕ್ಕವನು ಅರ್ಥಾರ್ಥಿ. ಇವು ಆರ್ತ ಭಕ್ತನಿಗಿಂತ ಉತ್ತಮ. ಇವನಿಗಿಂತ ಮೇಲ್ಮಟ್ಟದವನು ಜಿಜ್ಞಾಸುವಾದ ಭಕ್ತ. ಇವನು ಅಧ್ಯಾತ್ಮ ವಿಚಾರಗಳಲ್ಲಿ ತೊಡಗಿ ಆತ್ಮಜ್ಞಾನವನ್ನು ಪಡೆಯಲು ಪ್ರಯತ್ನಿಸತಕ್ಕವನು. ಇವನಲ್ಲಿ ಸತ್ತ್ವಗುಣವು ಅಧಿಕ ಪ್ರಮಾಣದಲ್ಲಿರುತ್ತದೆ. ಇವರೆಲ್ಲರಿಗಿಂತಲೂ ಶ್ರೇಷ್ಠನಾದ ಭಕ್ತ ಎಂದರೆ ಆತ್ಮಜ್ಞಾನಿ. ಶ್ರೀಕೃಷ್ಣನು **''ಜ್ಞಾನೀ ತ್ವಾತ್ಮೈವ ಮೇ ಮತಃ''** - ಜ್ಞಾನಿ ಭಕ್ತನು ನನ್ನ ಆತ್ಮ. ಆತನು ನಾನೇ ಆಗಿರುತ್ತಾನೆಂಬುದು ನನಗೆ ಸಂಮತ ಎಂದು ಹೇಳಿದ್ದಾನೆ. **''ಬ್ರಹ್ಮವಿದ್ ಬ್ರಹ್ಮೈವ ಭವತಿ''**

ಜಗತ್ತಿಗೇ ಒಡೆಯನಾದ ಈಶ್ವರನಿದ್ದಾನೆ. ಅವನು ಸರ್ವವನ್ನೂ ತಿಳಿಯಬಲ್ಲವನು. ಅವನಿಗೆ ತಿಳಿಯದಂತೆ ನಾವು ಯಾವ ಕಾರ್ಯವನ್ನೂ ಮಾಡಲಾರೆವು. ಪಾಪಕಾರ್ಯಕ್ಕೆ ದಂಡನೆಯಾಗಿಯೇ ತೀರುತ್ತದೆ. ನಾವು ನರಕದಲ್ಲಿ ಬೀಳಬೇಕಾಗುತ್ತದೆ - ಮುಂತಾದ ವಿಷಯಗಳು ಗೊತ್ತಿದ್ದರೂ ಜನರು ಮನಸ್ಸನ್ನೂ, ಇಂದ್ರಿಯಗಳನ್ನೂ ಜಯಿಸಲಾರದೆ ಪಾಪಕೃತ್ಯಗಳನ್ನು ಮಾಡುತ್ತಿದ್ದಾರೆ. ಹೀಗಿರುವಾಗ, ಈಶ್ವರನಿಲ್ಲ, ಜನ್ಮಾಂತರವಿಲ್ಲ, ಪಾಪ- ಪುಣ್ಯಗಳ ಫಲ ಎಂಬುದು ಸುಳ್ಳು - ಎಂದು ತಿಳಿದವರ ನಡತೆ ಯಾವ ರೀತಿ ಇದ್ದೀತೆಂದು ಊಹಿಸುವುದು ಸಹ ಶಕ್ಯವಲ್ಲ. ಮನುಷ್ಯನು ದೊಡ್ಡತನದಿಂದ ಬಾಳಬೇಕು. ಮೃಗದಂತೆ ನಡೆಯಬಾರದು, ಸತ್ಯ, ಪರೋಪಕಾರ, ಅಹಿಂಸೆ - ಈ ಸದ್ಗುಣಗಳು ಮನುಷ್ಯ ಧರ್ಮಗಳು. ''ಸೌಜನ್ಯವೇ ಮನುಷ್ಯತ್ವ'' ಎಂದು ಆಸ್ತಿಕರು ಹೇಳುವುದು ಅರ್ಥಶೂನ್ಯವಾದ ಉಪದೇಶವೆಂದು ನಾಸ್ತಿಕ ಶಿಷ್ಯರು ತಿಳಿಯುತ್ತಾರೆ. ಈ ನಾಸ್ತಿಕಾಚಾರ್ಯರು ''ತೊಟ್ಟಿಲು ತೂಗುವುದು,

ಮಗುವನ್ನು ಚಿವುಟುವುದು'' ಎಂಬ ಗಾದೆಯಂತೆ ನಡೆಯುತ್ತಿದ್ದಾರೆ. ನಾಸ್ತಿಕವಾದವನ್ನು ಪ್ರಚುರಪಡಿಸಿದರೆ ಮುಂದೆ ಸಮಾಜದ ಗತಿ ಏನು ಆದೀತೆಂಬುದನ್ನು ಇವರು ಚಿಂತಿಸಿಯೇ ಇಲ್ಲ. ಇದೆಲ್ಲವನ್ನೂ ತಿಳಿದ ಸರ್ವಜ್ಞ ಶ್ರೀಕೃಷ್ಣನು -

**''ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ।''** (೧೬-೭) ಎಂದು ಸ್ಪಷ್ಟವಾಗಿ ಹೇಳಿಬಿಟ್ಟಿದ್ದಾನೆ. ''ಈ ಆಸುರಪ್ರಕೃತಿಯ ಜನರು ಯಾವ ಕಾರ್ಯದಲ್ಲಿ ಪ್ರವರ್ತಿಸಬೇಕು , ಯಾವುದರಲ್ಲಿ ಪ್ರವರ್ತಿಸದೆ ನಿವೃತ್ತಿ ಹೊಂದಬೇಕು ಎಂಬುದನ್ನು ತಿಳಿದಿರುವುದಿಲ್ಲ '' ಎಂದು ಹೇಳಿದ್ದಾನೆ.

ಶ್ರೀಕೃಷ್ಣನು ಇನ್ನೂ ಹೇಳುತ್ತಾನೆ -

**''ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ।**
**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್ ॥''**

(೧೬-೨೦)

''ಆಸುರ ಜನ್ಮವನ್ನು ಪಡೆದ ಆ ಮೂಢರು, ಅರ್ಜುನ, ಜನ್ಮ ಜನ್ಮಗಳಲ್ಲಿಯೂ ನನ್ನನ್ನು ಪಡೆಯಲಾರದೇ ಕೊನೆ ಕೊನೆಗೆ ಇನ್ನೂ ಅಧೋಗತಿಗೆ ಇಳಿಯುತ್ತಾರೆ.''

ಕಾಮ, ಕ್ರೋಧ, ಲೋಭ - ಈ ಮೂರು ನರಕಕ್ಕೆ ಕಾರಣವಾದವು. ಆಸುರ ಸಂಪತ್ತಿನ ಮೂಲವು ಈ ಮೂರರಲ್ಲಿದೆ. ವಿವೇಕಿಯಾದವನು ಇವನ್ನು ಪೂರ್ಣವಾಗಿ ತ್ಯಜಿಸಿ ದೈವ ಸಂಪತ್ತನ್ನು ಗಳಿಸಿಕೊಳ್ಳಬೇಕು. ಅದಕ್ಕಾಗಿ ಇಂದ್ರಿಯಗಳನ್ನು ಬಿಗಿಹಿಡಿದು ಪ್ರಯತ್ನಿಸಬೇಕು. ಸತತ ಪ್ರಯತ್ನ ಮಾಡುತ್ತಿದ್ದರೆ ಅದೇನೂ ದುರ್ಲಭವಲ್ಲ.

ಈ ಪ್ರಕಾರದಲ್ಲಿ ಶ್ರೀಕೃಷ್ಣನು ಗೀತಾಗ್ರಂಥದಲ್ಲಿ ಅರ್ಜುನನ ಪ್ರಶ್ನೆಗಳಿಗೆ ಉತ್ತರ ನೀಡುತ್ತಾ ನಾನಾ ವಿಧದಲ್ಲಿ ಹಿತೋಪದೇಶ ಮಾಡಿದ್ದಾನೆ. ಇದರಲ್ಲಿನ ಏಳುನೂರು ಶ್ಲೋಕಗಳೂ ಲಲಿತ ಭಾಷೆಯಲ್ಲಿವೆ. ಸಾಕ್ಷಾತ್ ಭಗವಂತನೇ ಉಪದೇಶಿಸಿರುವ ಬೋಧೆಗಳ ವಿಚಾರವಾಗಿ ನಾವು ಏನನ್ನು ಪ್ರತಿಯಾಗಿ ಹೇಳಬಲ್ಲೆವು? ಯಥಾಮತಿಯಾಗಿ ಯಥಾಶಕ್ತಿಯಾಗಿ ಆತನ ಅಪ್ಪಣೆಯನ್ನು ಪಾಲಿಸುವುದೇ ನಮಗೆ

ಶ್ರೇಯಸ್ಕರ. ಕರ್ಮಯೋಗ, ಭಕ್ತಿಯೋಗ, ಧ್ಯಾನಯೋಗ, ಜ್ಞಾನಯೋಗ - ಇವುಗಳಲ್ಲಿ ಯಾವ ಮಾರ್ಗವು ನಮಗೆ ಉತ್ತಮ? ಎಂಬ ವಿಚಾರಕ್ಕೆ ಸಹ ನಾವು ಹೋಗಬೇಕಾಗಿಲ್ಲ. ಅಂತಹ ಗೊಂದಲವನ್ನು ಹಚ್ಚಿ ನಾವು ತಲೆಕೆಡಿಸಿಕೊಳ್ಳಬೇಕಾಗಿಯೂ ಇಲ್ಲ. ಈ ಬಗೆಯ ಒಂದು ಚಿಂತೆ ಅರ್ಜುನನನ್ನು ಕಾಡಬಹುದು - ಎಂಬ ಮುಂದಾಲೋಚನೆಯಿಂದ ಶ್ರೀಕೃಷ್ಣನೇ ಭಗವದ್ಗೀತೆಯ ಕಡೆಯಲ್ಲಿ ಒಂದು ದಾರಿಯನ್ನು ತಿಳಿಸಿಕೊಟ್ಟಿದ್ದಾನೆ. ಏನೆಂದರೆ,

**''ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥ ''**

(೧೮-೬೬)

''ಅರ್ಜುನ, ನಾನು ಬೋಧಿಸಿದ ಮಾರ್ಗದಲ್ಲಿ ಯಾವುದನ್ನು ಪಾಲಿಸಲಿ? - ಎಂಬ ಗೊಂದಲಕ್ಕೆ ಒಳಗಾಗಬೇಡ. ಎಲ್ಲ ಚಿಂತೆಗಳನ್ನೂ ಬಿಟ್ಟು ನನ್ನೊಬ್ಬನಿಗೇ ಪೂರ್ತಿಯಾಗಿ ಶರಣಾಗು. ನಿನಗೆ ಯಾವ ಪಾಪವೂ ಅಂಟದಂತೆ ನೋಡಿಕೊಂಡು ಕಡೆಗೆ ಮೋಕ್ಷವನ್ನೂ ಅನುಗ್ರಹಿಸುತ್ತೇನೆ. ನೀನು ಶೋಕಿಸಬೇಡ''

**''ಮಚ್ಚಿತ್ತಃ ಸತತಂ ಭವ ''**- ಯಾವಾಗಲೂ ನನ್ನನ್ನು ಸ್ಮರಿಸುತ್ತಿರು - ಎಂಬುದೇ ಭಗವಂತನ ದಿವ್ಯವಾಣಿ.



-೨-

ಗಂಭೀರವಾದ ಜಗದ್ರಹಸ್ಯದ ಮೂಲತತ್ತ್ವಗಳನ್ನು ಶೋಧಿಸಿ ವಿಮರ್ಶಿಸುವ ಗ್ರಂಥಗಳಿಗೆ ದರ್ಶನಗಳೆಂದು ಹೆಸರು. ಇವುಗಳಲ್ಲಿ ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವಮೀಮಾಂಸಾ, ಉತ್ತಮ ಮೀಮಾಂಸಾ (ವೇದಾಂತ) ಎಂಬಿವು ಷಡ್‌ದರ್ಶನಗಳೆಂದು ಪ್ರಸಿದ್ಧವಾಗಿವೆ. ಇವೆಲ್ಲವೂ ವೇದವನ್ನು ಪ್ರಮಾಣವೆಂದು ಅಂಗೀಕರಿಸುವುದರಿಂದ ವೈದಿಕ ದರ್ಶನಗಳು. ಜೈನ, ಬೌದ್ಧ - ಎಂಬ ಇನ್ನೆರಡು ದರ್ಶನಗಳು ವೇದವನ್ನು ಪ್ರಮಾಣವಾಗಿ ಸ್ವೀಕರಿಸಿಲ್ಲವಾದ್ದರಿಂದ ಅವೈದಿಕ ದರ್ಶನಗಳೆನಿಸಿವೆ. ಜೈನ ದರ್ಶನವು ತೀರ್ಥಂಕರ ವಚನವನ್ನು, ಬೌದ್ಧದರ್ಶನವು ಬುದ್ಧದೇವನ ವಚನವನ್ನು ಪ್ರಮಾಣವೆಂದು ಸ್ವೀಕರಿಸುತ್ತವೆ. ಇವು ಎಂಟು ಭಾರತೀಯ ದರ್ಶನಗಳು. ಈ ಎಲ್ಲ ದರ್ಶನಗಳೂ ಧರ್ಮ - ಅಧರ್ಮಗಳನ್ನು ಪುನರ್ಜನ್ಮವನ್ನು ಒಪ್ಪುತ್ತವೆ. ಬೌದ್ಧ ದರ್ಶನದಲ್ಲಿ ಒಂದು ಭೇದವಾದ ಮಾಧ್ಯಮಿಕ ದರ್ಶನಕ್ಕೆ ಶೂನ್ಯವಾದ ಎಂಬ ಹೆಸರಿದೆ. ಈ ವಾದದ ತಾತ್ಪರ್ಯವನ್ನು ತಿಳಿಯುವುದು ಕಷ್ಟ.

ನಮಗೆ ಈಗ ಪ್ರಕೃತವಾದದ್ದು ಈ ದರ್ಶನಗಳ ಪ್ರಮೇಯವನ್ನು ಕುರಿತು ಅಲ್ಲ. ದೇವರು (ಈಶ್ವರ) ಇದ್ದಾನೆಯೇ? ಇಲ್ಲವೇ? ಎಂಬುದಿಷ್ಟೇ ವಿಚಾರಕ್ಕೆ ವಿಷಯವಾದದ್ದು. ಈ ಕಾಲದಲ್ಲಿ ವಿಚಾರವಾದಿಗಳೆಂದು ಹೇಳಿಕೊಳ್ಳುವ ಕೆಲವು ಬುದ್ಧಿವಂತರು ದೇವರು ಇಲ್ಲ ಎಂದು ಪ್ರತಿಪಾದಿಸುತ್ತಾ ಹಲವು ಪುಸ್ತಕಗಳನ್ನು ಬರೆಯುತ್ತಿದ್ದಾರೆ. ದೇವರಿದ್ದರೆ ಪ್ರತ್ಯಕ್ಷವಾಗಿ ಕಾಣುತ್ತಿದ್ದ. ಪ್ರತ್ಯಕ್ಷನಾಗಿಲ್ಲ ಎಂದು ಹೇಳುವುದಿಷ್ಟೇ ಇವರು ಹೇಳುವ ಯುಕ್ತಿ. ಈ ವಿಷಯವಾಗಿ ಪೂರ್ವೋಕ್ತ ದರ್ಶನಗಳು ನಾನಾ ಯುಕ್ತಿಗಳನ್ನು ಪ್ರದರ್ಶಿಸಿ ವಾದ ಮಾಡಿವೆ. ಆ ದರ್ಶನಗಳನ್ನು ಈ ವಿಚಾರವಾದಿಗಳು ಓದಿಯೇ ಇಲ್ಲವೆಂಬುದು ಅವರ ಪುಸ್ತಕಗಳಿಂದಲೇ

ಗೊತ್ತಾಗುತ್ತದೆ. ಮುಖ್ಯವಾಗಿ ಚಾರ್ವಾಕರು ಪ್ರತಿಪಾದಿಸಿದ ಒಂದು ಅಂಶವನ್ನೇ ಇವರು ಹೇಳುತ್ತಿದ್ದಾರೆ. ಈ ಜನರು ಈ ಪುಸ್ತಕಗಳನ್ನು ಬರೆಯುವ ಉದ್ದೇಶವಾದರೂ ಏನು? ಸಂಸ್ಕೃತವನ್ನು ಅರಿಯದ ಕನ್ನಡಿಗರಿಗಾಗಿ ಬರೆಯುತ್ತಿರಬಹುದು ಎಂದು ಸಾಮಾನ್ಯವಾಗಿ ಊಹಿಸಬಹುದು. ಆದರೆ ಅಷ್ಟಕ್ಕೇ ನಿಲ್ಲದೆ ಆಸ್ತಿಕರೊಪ್ಪುವ ದೇವರನ್ನು ನಾನಾ ಪ್ರಕಾರಗಳಿಂದ ದೂಷಿಸುವುದು ಕಂಡುಬರುತ್ತದೆ. ವಿಗ್ರಹಪೂಜೆಯ ನಿರಾಕರಣೆ, ಗಣಪತಿ, ಶಿವ, ವಿಷ್ಣು ಮುಂತಾದ ದೇವತೆಗಳ ಸ್ವರೂಪವನ್ನು ಗೇಲಿ ಮಾಡುವುದು, ದೇವರು ಕರುಣಾಳುವಲ್ಲ, ಪಕ್ಷಪಾತಿ, ಲಂಚವನ್ನು ಸ್ವೀಕರಿಸತಕ್ಕವನು ಇತ್ಯಾದಿ ಹೇಳಿಕೆಗಳಿಂದ ದೂಷಿಸುವುದು ಕಂಡುಬರುತ್ತದೆ. ಈಶ್ವರನಿಲ್ಲ ಎಂದು ವಾದಿಸಿದ ಮೇಲೆ ಈ ದೂಷಣೆಗಳು ಅರ್ಥವಿಲ್ಲದವುಗಳಾಗುತ್ತವೆ. ಅಷ್ಟಕ್ಕೇ ನಿಲ್ಲದೆ ಹೊಟ್ಟೆಪಾಡಿಗಾಗಿ ಒಂದು ವರ್ಗದವರು ಪೂಜೆ, ಹರಕೆ, ಹೋಮ ಇತ್ಯಾದಿಗಳಿಂದ ಹಣ ಸಂಪಾದಿಸುವುದಕ್ಕೆ ಹೂಡಿರುವ ಉಪಾಯಗಳು ಇವು ಎಂದು ಬರೆಯುವುದಕ್ಕೂ ಇವರು ಹೇಸುವುದಿಲ್ಲ.

ಈ ಬಗೆಯ ಪುಸ್ತಕಗಳನ್ನು ಬರೆಯುವ ಉದ್ದೇಶವಾದರೂ ಏನು? ಜನತೆಗೆ ಉಪಯುಕ್ತವಾದ ನೂತನ ವಿಷಯಗಳನ್ನು ಪರಿಚಯ ಮಾಡಿಸುವುದು, ಜನರ ನೈತಿಕ ವರ್ತನೆಯನ್ನು ಉತ್ತಮಗೊಳಿಸುವುದು ಮತ್ತು ಮನೋರಂಜನೆ - ಇವುಗಳಲ್ಲಿ ಒಂದಾದರೂ ಗ್ರಂಥ ರಚನೆಯ ಉದ್ದೇಶವಾಗಿರಬೇಕೆಂದು ನಾನು ಭಾವಿಸಿದ್ದೇನೆ. ಈ ಯಾವ ಉದ್ದೇಶವೂ ಈ ವಿಚಾರವಾದಿಗಳ ಬರಹಗಳಲ್ಲಿ ಕಂಡುಬರುವುದಿಲ್ಲ. ಸಾಮಾನ್ಯವಾಗಿ ಜನರು ದೇವರು, ಧರ್ಮ, ಇವುಗಳಿಗೆ ಅಂಜಿ ತಮ್ಮ ನೀತಿ ನಡತೆಗಳನ್ನು ಸರಿಪಡಿಸಿಕೊಂಡಿರುತ್ತಾರೆ. ಅವರ ನಂಬಿಕೆಗಳೇ ಅವರಿಗೆ ದಾರಿದೀಪವಾಗಿರುತ್ತವೆ. ಮೂಢನಂಬಿಕೆಯಾದರೂ ಚಿಂತೆಯಿಲ್ಲ, ಅದರ ಫಲವು ಉತ್ತಮವಾಗಿದ್ದರೆ ಸಾಕು. ಈಗಾಗಲೇ ನಾನಾ ಕಾರಣಗಳಿಂದ ಜನರು ನೀತಿಭ್ರಷ್ಟರಾಗಿ ವರ್ತಿಸುತ್ತಿದ್ದಾರೆಂದು ಸರ್ವರಿಗೂ ವಿದಿತವಾಗಿದೆ. ದೇವರಲ್ಲಿಯೂ ಧರ್ಮದಲ್ಲಿಯೂ ನಂಬಿಕೆಯನ್ನು ತಪ್ಪಿಸುವುದರಿಂದ ಯುವ ಜನಾಂಗವು ಮತ್ತಷ್ಟು ನೀತಿಗೆಟ್ಟು ಹೋಗುವುದರಲ್ಲಿ

ಸಂಶಯವಿಲ್ಲ. ಇದೊಂದು ಬಗೆಯ ಸಮಾಜದ್ರೋಹ ಮತ್ತು ರಾಷ್ಟ್ರದ್ರೋಹವೆಂದು ಹೇಳಬಹುದು.

ನಮ್ಮ ಪೂರ್ವಜರು ಧರ್ಮ, ಅರ್ಥ, ಕಾಮ, ಮೋಕ್ಷ ಎಂಬಿವು ನಾಲ್ಕು ಪುರುಷಾರ್ಥಗಳೆಂದು ನಿಶ್ಚಯಿಸಿದ್ದರು. ಶಾಸ್ತ್ರದ ಉದ್ದೇಶವು ಜನರನ್ನು ಇವುಗಳಲ್ಲಿ ತೊಡಗಿಸುವುದು. ಪುರುಷಾರ್ಥವೆಂದರೆ ಮನುಷ್ಯನ ಜೀವಿತದ ಗುರಿ. ಈ ನಾಲ್ಕು ಮಾನವನ ಗುರಿಯೆಂದು ಸ್ಪಷ್ಟವಾಗಿ ಪ್ರತಿಪಾದಿಸಿದವರು ಭಾರತೀಯರು. ಜಗತ್ತಿನಲ್ಲಿ ಯಾವ ರಾಷ್ಟ್ರವೂ ಈ ಪುರುಷಾರ್ಥಗಳನ್ನು ಗೊತ್ತುಮಾಡಿ ತಿಳಿಸಿಲ್ಲ. ಇವುಗಳಲ್ಲಿ ಅರ್ಥಕಾಮಗಳನ್ನು ಪ್ರತಿಯೊಬ್ಬನೂ ಸಹಜವಾಗಿ ಬಯಸುತ್ತಾನೆ. ಅದಕ್ಕೆ ಯಾವ ಶಾಸ್ತ್ರಪ್ರೇರಣೆಯೂ ಬೇಕಾಗಿಲ್ಲ. ಅರ್ಥವೆಂದರೆ ಹಣ ಅಥವಾ ಭೋಗಸಾಮಗ್ರಿ. ಕಾಮವೆಂದರೆ ಈ ಭೋಗಸಾಮಗ್ರಿಯಿಂದುಂಟಾಗುವ ಸುಖ. ಈ ವಿಷಯದಲ್ಲಿ ವಿವಾದವೇನೂ ಇಲ್ಲ. ಆದರೆ ಈ ಅರ್ಥಕಾಮಗಳನ್ನು ಧರ್ಮಮಾರ್ಗದಿಂದಲೇ ಸಾಧಿಸಬೇಕು ಎಂಬುದನ್ನು ತಿಳಿಸುವುದಕ್ಕಾಗಿ ಮೊದಲು ಧರ್ಮವನ್ನು ಗಣಿಸಲಾಗಿದೆ. ಧರ್ಮ ಮಾರ್ಗದಿಂದಲೇ ಸಂಪಾದಿಸಿ ಧರ್ಮಯುಕ್ತವಾದ ಸುಖವನ್ನೇ ಅನುಭವಿಸಬೇಕೆಂದು ತಾತ್ಪರ್ಯ. ಆದರೆ ಈ ಸುಖವು ಶಾಶ್ವತವಲ್ಲ. ಜೀವನದಲ್ಲಿ ನಾನಾ ಬಗೆಯ ದುಃಖಗಳು ಸಂಭವಿಸುತ್ತವೆ. ಈ ಸುಖವು ದುಃಖಮಿಶ್ರಿತವಾದದ್ದು.

**''ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಮ್''** ಎಂಬ ಲೋಕೋಕ್ತಿಯು ಸತ್ಯವಾದದ್ದು. ಆದ್ದರಿಂದ ಶಾಶ್ವತವಾದ ಇನ್ನೊಂದು ಸುಖವಿದೆಯೆಂದೂ ಅದೇ ಮೋಕ್ಷವೆಂದೂ ನಮ್ಮ ಪ್ರಾಚೀನ ಋಷಿಗಳು ನಿಶ್ಚಯಿಸಿದ್ದಾರೆ. ಮೋಕ್ಷವೆಂಬ ಈ ಶಾಶ್ವತ ಸುಖಕ್ಕೆ ಧರ್ಮವೇ ಮೂಲಕಾರಣವೆಂದು ನಿರ್ಣಯಿಸಿ ಹೇಳಿದ್ದಾರೆ. ಆದರೆ ಜನರು ಕೇವಲ ಲೌಕಿಕವಾದ ಅರ್ಥಕಾಮಗಳನ್ನೇ ಬಯಸುತ್ತಾರೆ ಎಂಬುದು ಲೋಕವಿದಿತ. ಧರ್ಮ ಎಂಬುದನ್ನು ಪಾಲಿಸಲು ಇವರ ಪ್ರವೃತ್ತಿ ಸಾಮಾನ್ಯವಾಗಿ ಇಲ್ಲ. ಮಹಾಭಾರತದಲ್ಲಿ ವ್ಯಾಸಮಹರ್ಷಿಗಳು ಹೇಳುತ್ತಾರೆ - **''ಊರ್ಧ್ವಬಾಹುರ್ವಿರೌಮ್ಯೇಷಃ ನ ಚ ಕಶ್ಚಿತ್ ಶೃಣೋತಿ ಮೇ।**

**ಧರ್ಮಾದರ್ಥಶ್ಚ ಕಾಮಶ್ಚ ಸ ಧರ್ಮಃ ಕಿಂ ನ ಸೇವ್ಯತೇ''** ''ಧರ್ಮ ಮಾರ್ಗದಿಂದ ಅರ್ಥವೂ ಕಾಮವೂ ಸಿದ್ಧಿಸುತ್ತದೆ. ಇವುಗಳಿಗೆ ಸಾಧನವಾದ ಧರ್ಮವನ್ನು ನೀವು ಏಕೆ ಪಾಲಿಸುವುದಿಲ್ಲ? ಎಂದು ಎರಡೂ ಕೈಗಳನ್ನು ಎತ್ತಿ ನಾನು ಘೋಷಿಸುತ್ತಿದ್ದೇನೆ, ಆದರೆ ಯಾರೂ ನನ್ನ ಮಾತನ್ನು ಕೇಳುವುದೇ ಇಲ್ಲ! ''

ಹೀಗಿರುವಾಗ ದೇವರಿದ್ದಾನೆಂಬ ಆಸ್ತಿಕಮಾರ್ಗವೊಂದೇ ಧರ್ಮದಲ್ಲಿ ಶ್ರದ್ಧೆಯನ್ನುಂಟುಮಾಡಿ ಜನರನ್ನು ಸನ್ಮಾರ್ಗದಲ್ಲಿ ಪ್ರವರ್ತಿಸಬಲ್ಲದು. ಆದ್ದರಿಂದ ಈ ನಾಸ್ತಿಕಬೋಧೆಯು ಜನರಿಗೆ ದಾರಿಯನ್ನು ತಪ್ಪಿಸಿ ದುರ್ಮಾರ್ಗಕ್ಕೆ ಇಳಿಯಲು ಪ್ರೇರಣೆಯನ್ನೀಯುತ್ತದೆ ಎಂಬುದು ನಿಶ್ಚಯ. ಈ ಕಾರಣಗಳಿಂದ ವಿಚಾರವಾದಿಗಳ ವರ್ತನೆ ಸರಿಯಾದದ್ದಲ್ಲ. ದೇವರು (ಈಶ್ವರ) ಇದ್ದಾನೆ ಎಂದು ಸಾಧಿಸುವುದೇ ಈ ಗ್ರಂಥದ ಮುಖ್ಯ ಉದ್ದೇಶವಾಗಿದೆ.

ನಮ್ಮ ಯುವಜನರು ಕೇವಲ ಅರ್ಥಕಾಮಗಳಿಗೆ ವಶರಾಗಿ ಯಾವ ಭಯವೂ ಇಲ್ಲದೆ ತಪ್ಪುದಾರಿಗೆ ಇಳಿಯುತ್ತಿದ್ದಾರೆ. ಇಂತಹ ಸಂದರ್ಭದಲ್ಲಿ ಈಶ್ವರನಿಲ್ಲ, ಪಾಪಪುಣ್ಯಗಳ ಭಯವಿಲ್ಲ, ಸತ್ತ ಮೇಲೆ ದೇಹ ಬೂದಿಯಾಗುತ್ತದೆ. ಆದ್ದರಿಂದ, ಯಾವ ದಾರಿಯಿಂದಲಾದರೂ ಸುಖಪಡೋಣ ಎಂಬ ಭಾವನೆಯನ್ನುಂಟು ಮಾಡಿದರೆ ಎಷ್ಟು ಅನರ್ಥವಾಗುತ್ತದೆ ಎಂಬುದನ್ನು ಈ ವಿಚಾರವಾದಿಗಳು ಆಲೋಚಿಸಬೇಕು. ಈಶ್ವರನ ಅಸ್ತಿತ್ವವು ಯುಕ್ತಿಗಳಿಂದಲೂ, ಶಾಸ್ತ್ರಪ್ರಾಮಾಣ್ಯದಿಂದಲೂ ನಿಶ್ಚಿತವಾಗಿ ಸಿದ್ಧವಾಗುತ್ತದೆ. ಇದನ್ನೀಗ ಪರಿಶೀಲಿಸೋಣ.

ಈಶ್ವರನು ಪ್ರತ್ಯಕ್ಷನಲ್ಲವೆಂದು ಹೇಳತಕ್ಕವರು ಪ್ರತ್ಯಕ್ಷವೆಂದರೆ ಏನೆಂಬುದನ್ನು ತಿಳಿಯಬೇಕು. ಕಣ್ಣಿಗೆ ಮಾತ್ರ ಕಾಣಿಸುವುದು ಪ್ರತ್ಯಕ್ಷವಲ್ಲ. ನಮ್ಮ ಜ್ಞಾನೇಂದ್ರಿಯಗಳಿಗೆ ಗೋಚರಿಸುವುದೆಲ್ಲವೂ ಪ್ರತ್ಯಕ್ಷವೇ. ಶ್ರೋತ್ರ, ತ್ವಕ್, ನೇತ್ರ, ಜಿಹ್ವೆ, ಘ್ರಾಣವೆಂಬ ಪಂಚ ಜ್ಞಾನೇಂದ್ರಿಯಗಳಿಗೆ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಐದು ವಿಷಯಗಳು ಕ್ರಮವಾಗಿ ಗೋಚರಿಸುತ್ತವೆ. ಆದ್ದರಿಂದ ಕಣ್ಣಿಗೆ ಕಾಣಿಸುವುದು ವಸ್ತುವಿನ ರೂಪ ಮಾತ್ರ. ಇನ್ನು ಮಾನಸ ಪ್ರತ್ಯಕ್ಷ ಎಂಬ ಇನ್ನೊಂದು ಬಗೆಯ ಪ್ರತ್ಯಕ್ಷವಿದೆ. ಹಸಿವು,

ಬಾಯಾರಿಕೆ, ನೋವು, ಉರಿ, ಸುಖ, ದುಃಖ ಮುಂತಾದವು ಮನಸ್ಸಿಗೆ ಗೋಚರವಾಗುವುದರಿಂದ ಮಾನಸ ಪ್ರತ್ಯಕ್ಷಗಳೆನಿಸುತ್ತವೆ. ಈಶ್ವರನಿಗೆ ಯಾವ ರೂಪವೂ ಪರಮಾರ್ಥದಲ್ಲಿ ಇಲ್ಲ. ಅವನು ನಿರಾಕಾರ. ಪ್ರಾಯೇಣ ಸರ್ವಮತದವರೂ ಅವನು ನಿರಾಕಾರನೆಂಬುದನ್ನು ಒಪ್ಪಿದ್ದಾರೆ. ರೂಪವು ಮಾತ್ರವಲ್ಲ, ಶಬ್ದ ಸ್ಪರ್ಶಾದಿ ಯಾವ ಗುಣವೂ ಅವನಲ್ಲಿಲ್ಲವೆಂದೂ ಕಠೋಪನಿಷತ್ತು ಸಾರಿ ಹೇಳಿದೆ - **''ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾಽರಸಂ ನಿತ್ಯಮಗಂಧವಚ್ಚ ಯತ್''**(೧- ೩-೧೫) ಆದ್ದರಿಂದ ಈಶ್ವರನಿದ್ದರೆ ಪ್ರತ್ಯಕ್ಷನಾಗಬೇಕಿತ್ತು ಎಂಬ ವಾದವು ಅನುಚಿತವಾದುದು. ಈ ಸಂದರ್ಭದಲ್ಲಿ ಒಂದು ಘಟನೆ ಸ್ಮರಣೆಗೆ ಬರುತ್ತದೆ - ರಷ್ಯಾದ ಸರ್ವಾಧಿಕಾರಿಯಾಗಿದ್ದ ಕ್ರುಶ್ಚೇವ್ ಭಾರತಕ್ಕೆ ಬಂದಿದ್ದರು. ಆಗ ಮುರಾರ್ಜಿ ದೇಸಾಯಿಯವರು ಪ್ರಧಾನಮಂತ್ರಿಗಳಾಗಿದ್ದರು. ಅವರೊಡನೆ ಸಂಭಾಷಿಸುತ್ತಿರುವಾಗ ಕ್ರುಶ್ಚೇವ್ ಹೀಗೆ ಕೇಳಿದರಂತೆ - ''ದೇಸಾಯಿಯವರೇ ! ಇಷ್ಟು ದೊಡ್ಡ ಕಾರ್ಯಭಾರವನ್ನು ನೀವು ಹೇಗೆ ನಿರ್ವಹಿಸುತ್ತೀರಿ?'' ಎಂದು. ಆ ಸಂಭಾಷಣೆ ಹೀಗಿದೆ - ಮುರಾರ್ಜಿ ದೇಸಾಯಿ - ''ನಾನು ದೇವರನ್ನು ನಂಬಿದ್ದೇನೆ. ಅವನು ನನಗೆ ಒಂದು ಮಾರ್ಗವನ್ನು ಸೂಚಿಸುತ್ತಾನೆ.''

ಕ್ರುಶ್ಚೇವ್ - ''ನೀವು ದೇವರನ್ನು ನಂಬಿದ್ದೀರಿ ಮಾನ್ಯ ದೇಸಾಯಿಯವರೆ! ನಾವು ದೇವರೆಲ್ಲಿದ್ದಾನೆಂದು ಗೊತ್ತುಮಾಡುವುದಕ್ಕಾಗಿ ಒಂದು ರಾಕೆಟ್ಟನ್ನು ಬಾಹ್ಯಾಕಾಶದವರೆಗೆ ಕಳಿಸಿದೆವು. ಆದರೆ ದೇವರನ್ನು ಪತ್ತೆ ಮಾಡಲಾಗಲಿಲ್ಲ!''

ಮೈಸೂರಿನಲ್ಲಿ ಮಹಾರಾಜರ ಸರ್ಕಾರವಿದ್ದಾಗ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ದೊಡ್ಡ ಹುದ್ದೆಯಲ್ಲಿದ್ದರು. ಅವರು ಉತ್ತಮ ಸಾಹಿತಿಗಳು. ದೇವರಲ್ಲಿ ಶ್ರದ್ಧಾಭಕ್ತಿಗಳುಳ್ಳ ಆಸ್ತಿಕರಾಗಿದ್ದರು. ಅವರಿಗೆ ಒಬ್ಬ ಮಹನೀಯರಿಂದ ಒಂದು ಪತ್ರ ಬಂದಿತಂತೆ - ''ತಾವು ಹಿರಿಯರು, ಜ್ಞಾನಿಗಳು, ವಿಚಾರವಂತರು, ಮಾರ್ಗದರ್ಶನ ಮಾಡುವವರು, ದೇವರ ಅಸ್ತಿತ್ವವನ್ನು ಕಂಡವರು. ದೇವರ ಅಡ್ರೆಸ್ಸನ್ನು ದಯಮಾಡಿ ತಿಳಿಸುವಿರಾ? '' ಎಂದು. ಅದಕ್ಕೆ ಉತ್ತರವಾಗಿ ಶ್ರೀ ಮಾಸ್ತಿಯವರು

ಹೀಗೆ ಬರೆದರಂತೆ - ''ಅವಶ್ಯವಾಗಿ ತಿಳಿಸುತ್ತೇನೆ, ಆ ವಿಳಾಸ ಹೀಗಿದೆ - ದೇವರು ಶ್ರೀ XYZ ರವರ ಹೃದಯ C/o. (ಆ ಮಿತ್ರರ ವಿಳಾಸ) ನಮಸ್ಕಾರ. (ಶ್ರೀ ಮಾಸ್ತಿಯವರ ಅಂತರಗಂಗೆ ; ಪುಟ ೨೪)

ಭಗವಂತನು ನಿರಾಕಾರನಾದರೂ ಭಕ್ತರ ಅನುಗ್ರಹಕ್ಕಾಗಿ ಮಾಯಾಮಯವಾದ ರೂಪವನ್ನು ಧರಿಸಬಲ್ಲನೆಂದು ಶ್ರೀ ಶಂಕರಾಚಾರ್ಯರು ಹೇಳಿದ್ದಾರೆ - **''ಸ್ಯಾದೀಶ್ವರಸ್ಯಾಪಿ ಮಾಯಾಮಯಂ ರೂಪಂ ಸಾಧಕಾನುಗ್ರಹಾರ್ಥಂ''** (ಬ್ರ. ಸೂ. ೧-೧-೨೦) ಈ ಪ್ರಕಾರವಾಗಿ ಉಪನಿಷತ್ತುಗಳಲ್ಲಿಯೂ ಮಾಯಾಮಯವಾದ ರೂಪದ ವರ್ಣನೆ ಬಂದಿರುತ್ತದೆ. ಭಗವಂತನಿಗೆ ರೂಪವಿದೆಯೆಂದರೆ ಆತನಿಗೆ ನಮ್ಮಂತೆ ಭೌತಿಕವಾದ ದೇಹವಿರಬೇಕಾಗುತ್ತದೆ. ಈ ದೇಹವು ಪೃಥವೀ, ಜಲ ಮುಂತಾದ ಪಂಚಮಹಾಭೂತಗಳಿಂದ ಘಟಿತವಾದದ್ದು. ಈ ಪಂಚಮಹಾಭೂತಗಳನ್ನು ಸೃಷ್ಟಿಸಿದವನು ಅವನೇ ಆದಾಗ ಈ ಶರೀರವು ಅವನಿಗೆ ಬರುವುದಾದರೂ ಹೇಗೆ? ನಮ್ಮ ದರ್ಶನಗಳೆಲ್ಲವೂ ಪರಮಾತ್ಮನು ನಿರಾಕಾರನೆಂದೇ ಒಪ್ಪಿರುತ್ತವೆ. ಅವನ ಸಾಕ್ಷಾತ್ಕಾರ ಸುಲಭವಾದದ್ದಲ್ಲ. ಕಠೋರವಾದ ತಪಸ್ಸಿನಿಂದ ಅವನನ್ನು ಮೆಚ್ಚಿಸಬೇಕಾಗುತ್ತದೆ. ಧ್ರುವನು ಅಂತಹ ತಪಸ್ಸನ್ನು ಮಾಡಿ ವಿಷ್ಣುವನ್ನು ಒಲಿಸಿಕೊಂಡನೆಂಬ ಪುರಾಣ ಕಥೆಯಿದೆ. ಹಾಗೆಯೇ, ವಿಶ್ವಾಮಿತ್ರ ಮುನಿಗಳು ಬ್ರಹ್ಮದೇವನನ್ನು ಕುರಿತು ಎಷ್ಟು ಕಠೋರವಾದ ತಪಸ್ಸನ್ನು ಆಚರಿಸಿದರೆಂಬುದು ವಾಲ್ಮೀಕಿ ರಾಮಾಯಣದಲ್ಲಿ ಸ್ಫುಟವಾಗಿ ಬಂದಿದೆ. ಆಗಲೂ ಈಶ್ವರನು ಗೋಚರಿಸಿದ್ದು ಮಾಯಾಮಯರೂಪದಿಂದಲೇ. ಹೀಗೆ ಪರಮಾತ್ಮನ ಸಾಕ್ಷಾತ್ಕಾರಕ್ಕಾಗಿ ನಾನಾವಿಧ ಸಾಧನಗಳನ್ನು ಮಾಡಬೇಕಾಗುತ್ತದೆ. ಆ ದಿಶೆಯಲ್ಲಿ ಯಾವ ಪ್ರಯತ್ನವನ್ನೂ ಮಾಡದೆ ತಪಸ್ಸೆಂದರೇನೆಂಬುದನ್ನೂ ಅರಿಯದೆ ಶಾಸ್ತ್ರೋಕ್ತವಾದ ಆಚಾರವೊಂದನ್ನೂ ಪಾಲಿಸದೆ ''ದೇವರಿದ್ದರೆ ಕಾಣಿಸಲಿ'' ಎಂದು ಕೇಳತಕ್ಕವರ ಮೌಢ್ಯವನ್ನು ಏನೆಂದು ವರ್ಣಿಸೋಣ? ಒಬ್ಬ ಸಾಮಾನ್ಯ ಮಂತ್ರಿಯನ್ನು ನೋಡುವುದೇ ಕಷ್ಟವಾಗಿರುವಾಗ ಭಗವಂತನನ್ನು ನೋಡುವುದು ಸುಲಭವೆ? ಕರೆದ ಕೂಡಲೇ ಎದುರಿಗೆ ಬಂದು

ಹಾಜರಾಗಲು ಅವನೇನು ಈ ವಿಚಾರವಾದಿಗಳ ಜವಾನನೆ? ನಮ್ಮಂತಹ ಮಾನವರು ಎಷ್ಟು ಕೋಟಿ ಜನ ಹುಟ್ಟಿ ಸತ್ತರೊ? ಇನ್ನೂ ಎಷ್ಟು ಕೋಟಿ ಕೋಟಿ ಜನ ಹುಟ್ಟಿ ಸಾಯುವರೊ ಎಂಬುದು ಲೆಕ್ಕವಿದೆಯೆ? ಭಗವಂತನ ಈ ಬ್ರಹ್ಮಾಂಡದ ಸೃಷ್ಟಿಯಲ್ಲಿ ಈ ಮಾನವನು ಒಂದು ಕ್ರಿಮಿ, ಕ್ರಿಮಿಗಿಂತಲೂ ಕಡೆ ಎಂದು ತಿಳಿದಿರಬೇಕು.

ಈಶ್ವರನನ್ನು ನಂಬುವುದು ಮೂಢನಂಬಿಕೆಯೆಂದು ವಿಚಾರವಾದಿಗಳಾದ ಈ ಬುದ್ಧಿವಂತರು ಮತ್ತೆ ಮತ್ತೆ ಬರೆಯುತ್ತಾರೆ. ನಂಬಿಕೆಯೆಲ್ಲವೂ ಮೂಢವೇ ಆಗಿದೆ. ಮೂಢವಲ್ಲದ ನಂಬಿಕೆಯಾದರೂ ಯಾವುದು? ನಂಬಿಕೆಯಿಲ್ಲದೇ ಜಗತ್ತಿನ ಯಾವ ವ್ಯವಹಾರವೂ ನಡೆಯಲಾರದು. ನಾಳೆ ಸೂರ್ಯೋದಯವಾಗುತ್ತದೆ. ಮತ್ತೆ ರಾತ್ರಿ ಬರುತ್ತದೆಯೆಂಬ ನಂಬಿಕೆಯಿದೆಯಷ್ಟೆ? ಇದಕ್ಕೆ ಆಧಾರವೇನು? ಇಂದಿನವರೆಗೆ ತಪ್ಪದೇ ಪ್ರತಿದಿನ ಸೂರ್ಯೋದಯವಾಗುತ್ತಿದ್ದರೆ ನಾಳೆಯೂ ಆಗುತ್ತದೆ ಎಂದು ನಿಶ್ಚಯಿಸುವುದು ಹೇಗೆ? ಪ್ರತಿದಿನ ಪ್ರಾತಃಕಾಲ ಹಾಲಿನವನು ಹಾಲನ್ನೂ, ಪತ್ರಿಕೆಯವನು ಪತ್ರಿಕೆಯನ್ನೂ ತಂದು ಕೊಡುತ್ತಾರೆ. ನಾಳೆಯೂ ಹೀಗೆಯೇ ಆಗುವುದೆಂದು ಧೈರ್ಯದಿಂದ ಹೇಳಲಾದೀತೆ? ದೀರ್ಘಕಾಲ ಸುಖವಾಗಿರಲೆಂದು ಮಗಳನ್ನು ಒಬ್ಬ ವರನೊಡನೆ ಮದುವೆ ಮಾಡುತ್ತಾನೆ. ವರನಾಗಲಿ, ವಧುವಾಗಲಿ ದೀರ್ಘಕಾಲ ಬಾಳುತ್ತಾರೆಂದು ನಂಬಲು ಸಾಧ್ಯವಿದೆಯೇನು? ರಾತ್ರಿ ತಾಯಿಯೋ, ಹೆಂಡತಿಯೋ ಅಡುಗೆ ಮಾಡಿರುತ್ತಾರೆಂದು ತಿಳಿದು ಕೆಲಸಕ್ಕೆ ಹೋದವನು ರಾತ್ರಿ ಮನೆಗೆ ಬರುತ್ತಾನೆ. ಅಡುಗೆ ಮಾಡಿರುವುದು ನಿಶ್ಚಯವೇನು? ಮನೆಯಲ್ಲಿ ಅವರು ಜ್ವರದಿಂದ ಹಾಸಿಗೆ ಹಿಡಿದಿರಬಹುದು. ಹೀಗೆ ಪ್ರತಿಯೊಂದು ವ್ಯವಹಾರವೂ ನಂಬಿಕೆಯಿಂದಲೇ ನಡೆಯುತ್ತದೆ. ಇನ್ನೂ ಕಠೋರವಾಗಿ ನುಡಿಯಬೇಕೆಂದರೆ - ''ಇವರು ನಮ್ಮ ತಂದೆ - ತಾಯಿಗಳು, ಇವರು ನಮ್ಮ ಅಣ್ಣ - ತಮ್ಮಂದಿರು'' ಎಂದು ಜನ ಧೈರ್ಯವಾಗಿ ಹೇಳುತ್ತಾರಲ್ಲ, ಈ ನಂಬಿಕೆಗೆ ಆಧಾರವೇನು? ಇವರೇನು ಪ್ರತ್ಯಕ್ಷವಾಗಿ ನೋಡಿ ತಾಯಿ - ತಂದೆಗಳು ಯಾರೆಂಬುದನ್ನು ನಿಶ್ಚಯಿಸಿಕೊಂಡಿದ್ದಾರೆಯೆ? ಈ ಬಗೆಯ ವ್ಯವಹಾರವನ್ನು ಮೂಢನಂಬಿಕೆಯೆಂದು ಕರೆಯಬಹುದೆ? ಸ್ವಾಮಿ

ರಾಮತೀರ್ಥರು, ರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರು, ರಮಣ ಮಹರ್ಷಿಗಳು, ಅರವಿಂದ ಯೋಗಿಗಳು - ಇಂತಹ ಮಹಾಪುರುಷರನ್ನು ಯಾವ ನಾಲಿಗೆಯಿಂದ ಮೂಢರೆನ್ನಲಾದೀತು? ಶ್ರೀ ಶಂಕರಾಚಾರ್ಯರೇ ಮೊದಲಾದ ಆಚಾರ್ಯರು, ಅಭಿನವಗುಪ್ತ, ವಾಚಸ್ಪತಿಮಿಶ್ರ, ಅಪ್ಪಯ್ಯದೀಕ್ಷಿತ ಮೊದಲಾದ ದಿಗ್ಗಜ ವಿದ್ವಾಂಸರು ಭಗವಂತನನ್ನು ನಂಬಿದವರು. ಅವರನ್ನು ಮೂಢಾತ್ಮರೆಂದು ಹೇಳಲು ಈ ವಿಚಾರವಾದಿಗಳಿಗೆ ಯಾವ ಅಧಿಕಾರವಿದೆ? ಅಂಥ ಮಹಾತ್ಮರೊಡನೆ ಎದುರು ನುಡಿಯಲು ಸಹ ನಾವು ಅರ್ಹರಲ್ಲ. ಅವರಿಗೂ ಈ ಜನರಿಗೂ ಯಾವ ಹೋಲಿಕೆಯೂ ಸಲ್ಲದು. ಅವರೂ ಮನುಷ್ಯರು, ಈ ವಿಚಾರವಾದಗಳೂ ಮನುಷ್ಯರು. ಉಭಯರಲ್ಲಿಯೂ ಮನುಷ್ಯತ್ವ ಇರುವುದರಿಂದ ಹೋಲಿಸಬಹುದು. ಪರ್ವತವೂ ಒಂದು ಪದಾರ್ಥ. ಪರಮಾಣುವೂ ಒಂದು ಪದಾರ್ಥ - **''ಪರ್ವತೇ ಪರಮಾಣೌ ಚ ಪದಾರ್ಥತ್ವಂ ಪ್ರತಿಷ್ಠಿತಮ್''** ಆದ್ದರಿಂದ ಪರ್ವತ ಪರಮಾಣುಗಳೆರಡೂ ಒಂದೇ!

ಪ್ರತ್ಯಕ್ಷವಲ್ಲದೇ ಉಪಮಾನ, ಅನುಮಾನ, ಶಬ್ದ ಎಂಬ ಮೂರು ಪ್ರಮಾಣಗಳನ್ನು ತಾರ್ಕಿಕರು (ಶಾಸ್ತ್ರಕಾರರು) ಹೇಳಿದ್ದಾರೆ. ಉಪಮಾನವೆಂದರೆ ಸಾದೃಶ್ಯ. ಒಂದರ ಹೋಲಿಕೆಯಿಂದ ಇನ್ನೊಂದನ್ನು ಗುರುತಿಸುವುದು. ಭಾವಚಿತ್ರವನ್ನು ನೋಡಿ ಇದು ಇಂಥವರದು ಎಂದು ಗುರುತಿಸುವುದು ಉಪಮಾನವೆಂಬ ಪ್ರಮಾಣ. ಒಬ್ಬ ಹುಡುಗ ಕಾಣೆಯಾದರೆ ಅವನ ಭಾವಚಿತ್ರದಿಂದ ಪೋಲೀಸರು ಆ ಹುಡುಗನನ್ನು ಪತ್ತೆ ಮಾಡುತ್ತಾರೆಂಬುದು ಪ್ರಸಿದ್ಧವಾಗಿದೆಯಷ್ಟೆ. ಈ ನಿಶ್ಚಯವು ಉಪಮಾನ ಪ್ರಮಾಣದಿಂದಾಗುವುದು. ಇನ್ನು ಅನುಮಾನ ಎಂಬುದು ಒಂದು ಮುಖ್ಯವಾದ ಪ್ರಮಾಣವೆನ್ನಬಹುದು. ಕಾರ್ಯದಿಂದ ಕಾರಣವನ್ನು ನಿಶ್ಚಯಿಸುವುದೇ ಅನುಮಾನ ಪ್ರಮಾಣದ ಮುಖ್ಯ ಪ್ರಯೋಜನ. ಈ ನಿಶ್ಚಯಕ್ಕೆ 'ಉಪಮಿತಿ' ಎಂದು ಹೆಸರು. ಹೊಗೆಯನ್ನು ನೋಡಿ ಆ ಸ್ಥಳದಲ್ಲಿ ಬೆಂಕಿಯಿದೆಯೆಂದು, ರಾತ್ರಿ ಗುಡುಗುವುದರಿಂದ ಆಕಾಶದಲ್ಲಿ ಮೋಡವು ಕವಿದಿದೆಯೆಂದು, ಪ್ರಾತಃಕಾಲ ಬೀದಿಯ ಸಾಲು ಮರಗಳು ಒದ್ದೆಯಾಗಿರುವುದನ್ನು ನೋಡಿ ರಾತ್ರಿ ಮಳೆಯಾಗಿದೆಯೆಂದು ನಿಶ್ಚಯಿಸಬಹುದು.

ದೇವರ ಅಸ್ತಿತ್ವದ ವಿಚಾರದಲ್ಲಿ ಈ ಅನುಮಾನ ಪ್ರಮಾಣವನ್ನು ಯೋಜಿಸುವುದು ಶಾಸ್ತ್ರಪದ್ಧತಿಯೂ ಹೌದು - **''ಕ್ಷಿತ್ಯಂಕುರಾದಿಕಂ ಸಕರ್ತೃಕಂ ಕಾರ್ಯತ್ವಾತ್ ಘಟವತ್''** ಪೃಥ್ವಿ, ಗಿಡ ಮೊದಲಾದುದಕ್ಕೆ ಒಬ್ಬ ಕರ್ತೃವಿದ್ದಾನೆ. ಏಕೆಂದರೆ ಇವೆಲ್ಲವೂ ಕಾರ್ಯಗಳು - ಜನ್ಯಗಳು ಗಡಿಗೆಯಿದ್ದಂತೆ. ಗಡಿಗೆ ಒಂದು ಕಾರ್ಯ. ಅದನ್ನು ನೋಡಿ ಅದರ ಕರ್ತೃವಾದ ಕುಂಬಾರನಿದ್ದಾನೆಂದು ದೃಢವಾಗಿ ನಿಶ್ಚಯಿಸಬಹುದು. ಹಾಗೆಯೇ, ಈ ಜಗತ್ತು ಒಂದು ಕಾರ್ಯ. ಇದಕ್ಕೆ ಒಬ್ಬ ಕರ್ತೃವಿರಬೇಕು. ಊಹೆಗೂ ನಿಲುಕದಷ್ಟು ಅದ್ಭುತವೂ ವಿಶಾಲವೂ ನಿಯಮಬದ್ಧವೂ ಆದ ಈ ಜಗತ್ತನ್ನು ನಿರ್ಮಿಸಿದವನು ಯಾರು? ಮನುಷ್ಯನಿಂದ ಎಂದಿಗೂ ಸಾಧ್ಯವಾಗದ ಕಾರ್ಯವಿದು. ಇದನ್ನು ನಿರ್ಮಿಸಿದವನು ಸರ್ವಶಕ್ತನೂ ಸರ್ವಜ್ಞನೂ ಆಗಿರಲೇಬೇಕು. ಮತ್ತು ಲಕ್ಷಾಂತರ ವರ್ಷಗಳಿಂದ ಈ ಜಗತ್ತಿನ ವ್ಯವಹಾರವು ಕ್ರಮವಾಗಿ ನಡೆಯುತ್ತಲೇ ಇದೆ. ಆದ್ದರಿಂದ ಇದನ್ನು ನಿರ್ಮಿಸಿದವನು ದೀರ್ಘಕಾಲದಿಂದ ಜೀವಿಸಿದವನೇ ಆಗಿರಬೇಕು. ಆದ್ದರಿಂದಲೇ ಅಂತ್ಯವಿಲ್ಲದ್ದರಿಂದ ಶಾಶ್ವತನಾಗಿರಬೇಕು. ಜಗತ್ತಿನಲ್ಲಿರುವ ಸರ್ವವನ್ನೂ ಸೃಷ್ಟಿಸಿದವನಾದ್ದರಿಂದ ಅವನು ಸರ್ವಜ್ಞನಾಗಿರಲೇಬೇಕು. ಅವನನ್ನೇ ನಾವು ಈಶ್ವರ ಎಂದು ಹೇಳುತ್ತೇವೆ. ಆದ್ದರಿಂದ ಈಶ್ವರನೊಬ್ಬನಿದ್ದಾನೆಂದು ನಿಶ್ಚಯಿಸುವುದು ಪ್ರಾಮಾಣಿಕವಾಗಿದೆ. ಇದನ್ನು ಇನ್ನೂ ವಿಸ್ತಾರವಾಗಿ ಪರಿಶೀಲಿಸಬಹುದು. ಈ ಲೋಕದಲ್ಲಿ ಲೆಕ್ಕವಿಲ್ಲದಷ್ಟು ಸ್ಥಾವರ ಜಂಗಮಗಳಿವೆ. ಪ್ರಾಣಿಗಳೆಲ್ಲವೂ ಜಂಗಮವರ್ಗಕ್ಕೆ ಸೇರುತ್ತವೆ. ಇವುಗಳಲ್ಲಿ ಎಷ್ಟು ವಿಧವೆಂಬುದು ಅಚ್ಚರಿಯ ಸಂಗತಿ. ಉದಾಹರಣೆಗೆ ಮನುಷ್ಯ ಜಾತಿಯನ್ನೇ ತೆಗೆದುಕೊಳ್ಳಬಹುದು. ಎಷ್ಟು ಲೆಕ್ಕಾಚಾರದಿಂದ ಮನುಷ್ಯ ದೇಹದ ರಚನೆಯಿದೆಯೆಂಬುದನ್ನು ನೋಡಿ. ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು ಎಷ್ಟು ವ್ಯವಸ್ಥಿತವಾಗಿ ತಮ್ಮ ಕಾರ್ಯಗಳನ್ನು ಸಾಧಿಸುತ್ತಿವೆ ! ಜ್ಞಾನೇಂದ್ರಿಯಗಳಷ್ಟೂ ಮುಖದಲ್ಲಿ ಕೇಂದ್ರೀಕೃತವಾಗಿವೆ. ಕಣ್ಣಿಗೆ ನೋಡುವ ಶಕ್ತಿ, ಕಿವಿಗೆ ಕೇಳುವ ಶಕ್ತಿ ಮೊದಲಾದದ್ದು ಹೇಗೆ ಬರುತ್ತದೆ? ಜಡವಾದ ಈ ವಸ್ತುಗಳಲ್ಲಿ ಅದ್ಭುತವಾದ ಶಕ್ತಿ ಹೇಗೆ ಬಂದಿತು?

ಮನುಷ್ಯನಿಂದ ಈ ಶಕ್ತಿಯನ್ನು ತುಂಬುವುದು ಶಕ್ಯವಾದೀತೇನು? ಕೈಯಲ್ಲಿ ಐದು ಬೆರಳುಗಳಿವೆಯಷ್ಟೆ. ಇವುಗಳ ರಚನೆಯನ್ನು ನೋಡಿದರೆ ಸಾಕು. ನಾಲ್ಕು ಬೆರಳುಗಳಲ್ಲಿ ಒಂದೊಂದಕ್ಕೂ ಮಡಿಸುವುದಕ್ಕೆ ಅನುಕೂಲವಾಗಿ ಮೂರು ಮೂರು ಕೀಲುಗಳಿವೆ. ಇವುಗಳ ಸಾಲಿನಿಂದ ಹೆಬ್ಬೆರಳು ದೂರವಾಗಿದೆ. ಅದು ದಪ್ಪವಾಗಿ ಕಡಿಮೆ ಉದ್ದವಿರುವುದರಿಂದ ಎರಡೇ ಕೀಲುಗಳಿವೆ. ಬೆರಳುಗಳ ತುದಿಯಲ್ಲಿ ದೃಢತೆಯನ್ನುಂಟುಮಾಡುವುದಕ್ಕಾಗಿ ಉಗುರುಗಳ ನಿರ್ಮಾಣವಾಗಿದೆ. ಈ ರೀತಿಯಾದ ರಚನೆಯಿರುವುದರಿಂದಲೇ ಒಂದು ವಸ್ತುವನ್ನು ಗಟ್ಟಿಯಾಗಿ ಹಿಡಿಯಲು ಸಾಧ್ಯ. ಅಂತೆಯೇ ಕೈಯನ್ನು ಮಡಿಸುವುದಕ್ಕೆ ಅನುಕೂಲವಾಗಿ ಮುಷ್ಟಿ, ಮೊಳಕೈ , ಭುಜಗಳಲ್ಲಿ ಕೀಲುಗಳುಂಟು. ಇದನ್ನು ಪರಿಶೀಲಿಸಿದಾಗ ಇದರ ರಚನೆ ಚತುರನಾದ ಒಬ್ಬ ಶಿಲ್ಪಿಯಿಂದ ಆಗಿದೆಯೆಂದು ಊಹಿಸಬಹುದು. ಹೀಗೆಯೇ ದೇಹದ ಎಲ್ಲ ರಚನೆಗಳನ್ನು ಪರಿಶೀಲಿಸಬೇಕು. ಇನ್ನು ದೇಹದ ಒಳಭಾಗದಲ್ಲಿರುವ ಹೃದಯ, ಶ್ವಾಸಕೋಶ, ಜೀರ್ಣಾಂಗಗಳು, ಮಲ-ಮೂತ್ರ ವಿಸರ್ಜನೆಯ ವ್ಯವಸ್ಥೆ ಎಷ್ಟು ಆಶ್ಚರ್ಯಕರವಾದದ್ದು ! ಶ್ವಾಸಕೋಶವು ಉಸಿರಾಡುವುದಷ್ಟೆ. ಇದರ ಕಲ್ಪನೆ ವಿಚಿತ್ರವಾದುದು. ನಾವು ಗಾಳಿಯನ್ನು ಹೊರಗೆ ಬಿಡುತ್ತೇವೆ ಮತ್ತು ಒಳಗೆ ಸೆಳೆದುಕೊಳ್ಳುತ್ತೇವೆ. ಈ ಕಾರ್ಯವು ನಮ್ಮ ಪ್ರಯತ್ನದಿಂದ ಆಗುತ್ತದೆಯೇನು? ನಮ್ಮ ಗಮನವಿಲ್ಲದೆ ತನ್ನ ಪಾಡಿಗೆ ನಡೆಯುತ್ತಲೇ ಇರುತ್ತದೆ. ನಿದ್ದೆ ಬಂದಾಗಲೂ ಉಸಿರಾಟ ಇದ್ದೇ ಇರುತ್ತದೆ. ಹಾಗೆಯೇ ಹೃದಯವೂ ಸಂಕೋಚವಿಕಾಸಗಳಿಂದ ರಕ್ತವನ್ನು ಏಕಪ್ರಕಾರವಾಗಿ ರಕ್ತನಾಳದ ಮೂಲಕ ಕಳಿಸುತ್ತಲೇ ಇರುತ್ತದೆ. ಇದೆಲ್ಲವನ್ನೂ ಸೂಕ್ಷ್ಮವಾಗಿ ಪರಿಶೀಲಿಸಿದರೆ ಯಾರಿಗಾದರೂ ವಿಸ್ಮಯವಾಗುತ್ತದೆ. ಇಂತಹ ಶರೀರವನ್ನು ರಚಿಸಿದವರು ಯಾರು? ಜ್ಞಾನ, ಇಚ್ಛೆ ಮತ್ತು ಕ್ರಿಯೆ - ಇವುಗಳು ಈ ಜಡವಸ್ತುಗಳಲ್ಲಿ ಹೇಗೆ ಬಂದವು? ಇದೆಲ್ಲವೂ ಸ್ವಭಾವ ಎಂದು ತಳ್ಳಿಹಾಕುವುದು ಮೂರ್ಖತನವಲ್ಲದೆ ಬೇರೆ ಏನು? ಶ್ರೀ ವಿದ್ಯಾರಣ್ಯ ಸ್ವಾಮಿಗಳು ಪಂಚದಶೀ ಎಂಬ ತಮ್ಮ ಗ್ರಂಥದಲ್ಲಿ ಬರೆದಿರುವ ಈ ಶ್ಲೋಕವು ಗಮನಾರ್ಹವಾದುದು :-

**‘‘ಏತಸ್ಮಾತ್ಕಿಮಿವೇಂದ್ರಜಾಲಮಪರಂ ಯದ್ಗರ್ಭವಾಸೇಸ್ಥಿತಂ**
**ರೇತಶ್ಚೇತತಿಹಸ್ತಮಸ್ತಕಪದಪ್ರೋದ್ಭೂತನಾನಾಂಕುರಮ್ ।**
**ಪರ್ಯಾಯೇಣ ಶಿಶುತ್ವಯೌವನಜರಾವೇಷೈರನೇಕೈರ್ವೃತಂ**
**ಪಶ್ಯತ್ಯತ್ತಿ ಶೃಣೋತಿ ಜಿಘ್ರತಿ ತಥಾ ಗಚ್ಛತ್ಯಥಾಗಚ್ಛತಿ ॥’’**

(ಪಂಚದಶೀ : ಚಿತ್ರದೀಪಪ್ರಕರಣ ೧೪೭)

‘‘ಈ ಜಗತ್ತಿನಲ್ಲಿ ಇದಕ್ಕಿಂತ ಅದ್ಭುತವಾದ ಯಾವ ಇಂದ್ರಜಾಲವಿದ್ದೀತು? ಏನೆಂದರೆ, ಗರ್ಭದಲ್ಲಿರುವ ಒಂದು ವೀರ್ಯಬಿಂದುವಿಗೆ ಕ್ರಮವಾಗಿ ಚೈತನ್ಯ ಬಂದು ಚಲಿಸತೊಡಗುತ್ತದೆ. ಅದಕ್ಕೆ ಕೈಕಾಲುಗಳು ಹುಟ್ಟುತ್ತವೆ. ತಲೆ ಹುಟ್ಟುತ್ತದೆ. ಕೈಕಾಲುಗಳಿಗೆ ಬೆರಳುಗಳು, ತಲೆಗೆ ಕಿವಿ, ಕಣ್ಣು, ಮೂಗು, ಬಾಯಿ ಮೊದಲಾದವು ಅಂಕುರಗಳಂತೆ ಹುಟ್ಟುತ್ತವೆ. ಅನಂತರ ಆ ವೀರ್ಯಬಿಂದುವು ಶಿಶುವಾಗಿ ಜನಿಸುತ್ತದೆ. ಕ್ರಮವಾಗಿ ಬೆಳೆದು ಯೌವನ, ಮುಪ್ಪು ಮೊದಲಾದ ವೇಷಗಳನ್ನು ಧರಿಸುತ್ತದೆ. ಅದು ಕಣ್ಣಿಂದ ನೋಡಿ ವಸ್ತುವಿನ ರೂಪವನ್ನು ಗ್ರಹಿಸಬಲ್ಲದು. ಕಿವಿಯಿಂದ ಶಬ್ದಗಳನ್ನು ಆಲಿಸಬಲ್ಲದು. ಮೂಸಿ ವಾಸನೆಯನ್ನು ಹಿಡಿಯಬಲ್ಲದು. ದೂರಕ್ಕೆ ಹೋಗಬಲ್ಲದು. ಹಾಗೆಯೇ ಹಿಂದಕ್ಕೆ ಬರಬಲ್ಲದು.’’

ಹೀಗೆಯೇ, ದೇಹದಂತೆ ವಟವೃಕ್ಷದ ಬೀಜಾದಿಗಳ ಪರಿಸ್ಥಿತಿಯನ್ನು ಗಮನಿಸಬಹುದು. ಚಿಕ್ಕದಾದ ಆಲ, ಅರಳಿ ಬೀಜಗಳಿಂದ ಭಾರೀ ದೊಡ್ಡ ಮರಗಳೇ ಹುಟ್ಟಿ ಬೆಳೆಯುತ್ತವೆ. ಒಗರಾದ ಮಾವಿನ ಓಟೆಯಿಂದ ಹುಟ್ಟಿದ ಮರದಲ್ಲಿ ಸಿಹಿಯಾದ ಮಾವಿನ ಹಣ್ಣುಗಳು ದೊರೆಯುತ್ತವೆ. ಬೇವಿನ ಬೀಜಗಳಿಂದ ಕಹಿಯಾದ ಎಲೆ, ಬಾಳೆಯ ಬೇರಿನಿಂದ ಹುಟ್ಟಿದ ಬಾಳೆಮರದಲ್ಲಿ ಬಾಳೆಹಣ್ಣುಗಳು ಹೇಗೆ ಹುಟ್ಟುತ್ತಿರಬಹುದು? ಒಗರಾದ ಬಾಳೆ ಕಾಯಿಯಲ್ಲಿ ಹಣ್ಣಾದೊಡನೆ ಸಿಹಿ ಎಲ್ಲಿಂದ ಬಂದು ಸೇರುತ್ತದೆ. ಒಂದೇ ನೆಲದಲ್ಲಿ ಹುಟ್ಟಿದ ಮೆಣಸಿನ ಕಾಯಿ ಖಾರ, ನಿಂಬೆಹಣ್ಣು ಹುಳಿ, ಕಬ್ಬಿನ ಹಾಲು ಸಿಹಿ ಮೊದಲಾದವು ಆಶ್ಚರ್ಯಕರವಲ್ಲವೆ? ನೆಲ, ನೀರು, ಗಾಳಿ, ಬಿಸಿಲು ಇವು ಸಮಾನವಾಗಿರುವಾಗ ಬೇರೆ ಬೇರೆ ರುಚಿ ಹೇಗೆ ಬರುತ್ತದೆ?

ಇವೆಲ್ಲವನ್ನೂ ಚೆನ್ನಾಗಿ ಆಲೋಚಿಸಿದರೆ ಇದು ಭಗವಂತನ ಇಚ್ಛಾಶಕ್ತಿಯಿಂದಲೇ ಆದದ್ದು, ವಸ್ತು ಸ್ವಭಾವದಿಂದಲ್ಲ, ಮನುಷ್ಯ ಪ್ರಯತ್ನದಿಂದಲೂ ಅಲ್ಲ ಎಂದು ಸಂದೇಹವಿಲ್ಲದೆ ನಿರ್ಣಯಿಸಬಹುದಾಗಿದೆ. ಬಾಳೆ, ಭತ್ತ, ರಾಗಿ, ಜೋಳ ಮೊದಲಾದವು ಒಂದು ಸಲ ಫಸಲನ್ನು ಕೊಟ್ಟು ಸತ್ತು ಹೋಗುತ್ತವೆ. ಮಾವಿನ ಮರ ಮೊದಲಾದವು ಬಹಳ ಕಾಲ ಬದುಕಿದ್ದು ಪ್ರತಿವರ್ಷವೂ ಫಲವನ್ನು ನೀಡುತ್ತವೆ. ಮಾವು, ಹಲಸು ಮೊದಲಾದವುಗಳು ಗೊತ್ತಾದ ಕಾಲದಲ್ಲಿ ಮಾತ್ರ ಫಸಲನ್ನು ನೀಡುತ್ತವೆ. ತೆಂಗು ಇಡೀ ವರ್ಷವೆಲ್ಲಾ ಫಲವನ್ನು ಕೊಡುತ್ತಲೇ ಇರುತ್ತದೆ. ಅದೇ ಜಾತಿಗೆ ಸೇರಿದ ಅಡಿಕೆ ಮರ ವರ್ಷಕ್ಕೆ ಒಂದೇ ಸಲ ಫಲ ಕೊಡುತ್ತದೆ. ಕೆಲವು ಮರಗಳು ಬೀಜದಿಂದ ಹುಟ್ಟುತ್ತವೆ. ಕೆಲವು ಬೇರುಗಳಿಂದ, ಇನ್ನೂ ಕೆಲವು ಕೊಂಬೆಗಳನ್ನು ಕತ್ತರಿಸಿ ನೆಟ್ಟರೆ ಬೆಳೆಯುತ್ತವೆ. ಇದೇ ಬಗೆಯ ವೈಚಿತ್ರ್ಯಗಳನ್ನು ಬಳ್ಳಿಗಳಲ್ಲೂ ಕಾಣಬಹುದು. ಬಳ್ಳಿ ಯಾವಾಗಲೂ ತನಗೆ ಆಶ್ರಯವಾದ ಮರವನ್ನೋ, ಕಂಬವನ್ನೋ ಬಲಭಾಗದಿಂದಲೇ ಸುತ್ತುಹಾಕುತ್ತದೆ. ಅದನ್ನು ಬಲಾತ್ಕಾರವಾಗಿ ಎಳೆದು ಎಡಕ್ಕೆ ತಿರುಗಿಸಿ ಕಟ್ಟುಹಾಕಿದರೂ ಎಡಭಾಗದಿಂದ ಸುತ್ತದೆ ಬಲಕ್ಕೇ ಸುತ್ತುವರಿಯುತ್ತದೆ.

ಇವೆಲ್ಲವನ್ನೂ ಪರಿಶೀಲಿಸಿದಾಗ ಜಗನ್ನಿರ್ಮಾಣವು ಜಡಪ್ರಕೃತಿಯಿಂದ ಎಂದೂ ಆಗತಕ್ಕದ್ದಲ್ಲ. ಸರ್ವಜ್ಞನೂ, ಸರ್ವಶಕ್ತನೂ ಆದ ಒಂದು ಮಹಾಚೇತನದ ಲೀಲಾವಿಲಾಸವೇ ಈ ಜಗತ್ತು ಎನ್ನುವುದು ಯುಕ್ತವಾಗಿದೆ. ಸಾಂಖ್ಯರಾದರೋ ಪ್ರಕೃತಿಯೆಂಬ ಜಡವಸ್ತು ಈ ಪ್ರಪಂಚವನ್ನು ಹೇಗೆ ನಿರ್ಮಿಸಲು ಶಕ್ತ? ಎಂಬ ಶಂಕೆಗೆ ಉತ್ತರವಾಗಿ ಪುರುಷನನ್ನು ಒಪ್ಪಿಕೊಳ್ಳುತ್ತಾರೆ. ಆದರೆ ಈ ಪುರುಷನು ಏನನ್ನೂ ಮಾಡುವುದಿಲ್ಲ. ಆತನ ಸನ್ನಿಧಾನದಿಂದಲೇ ಪ್ರಕೃತಿಯು ತನ್ನ ಕಾರ್ಯದಲ್ಲಿ ತೊಡಗುತ್ತದೆಯೆಂದು ಹೇಳುತ್ತಾರೆ. ಅವರ ಮತದಲ್ಲಿ ಪುರುಷನೆಂದರೆ ಜೀವ. ಅವರು ಪುರುಷನನ್ನು ಅಸಂಖ್ಯಾತರು ಎಂದು ಒಪ್ಪುತ್ತಾರೆ. ಅವರೆಲ್ಲರ ಸಾನ್ನಿಧ್ಯವು ಪ್ರಕೃತಿಯ ಕ್ರಿಯೆಗೆ ಕಾರಣವಾಗುತ್ತದೆಯೆಂಬುದು ಅಂಗೀಕಾರಾರ್ಹವಲ್ಲ. ಆದ್ದರಿಂದ, ಯೋಗದರ್ಶನವು ಅಂಗೀಕರಿಸಿರುವ ಈಶ್ವರನನ್ನು ಸೇರಿಸಿ ಸೇಶ್ವರಸಾಂಖ್ಯವೆಂಬ

ಒಂದೇ ಸಾಂಖ್ಯ ಮತವನ್ನು ವಿದ್ವಾಂಸರು ಅಂಗೀಕರಿಸುವುದುಂಟು.

ನನ್ನ ಅನುಭವಕ್ಕೆ ಬಂದ ಒಂದು ಸಂಗತಿಯನ್ನು ಇಲ್ಲಿ ನಿರೂಪಿಸಬೇಕೆಂಬ ಇಚ್ಛೆಯಾಗಿದೆ. ನನ್ನ ಕೋಣೆಯಲ್ಲಿ ಬಟ್ಟೆಗಳನ್ನಿಡಲು ಒಂದು ಕಬ್ಬಿಣದ ಬೀರು (ಅಲ್ಮೈರಾ) ವನ್ನು ಇಟ್ಟುಕೊಂಡಿದ್ದೆ. ಒಂದು ದಿನ ಬೀರುವನ್ನು ತೆಗೆದಾಗ ಚಿಕ್ಕ ಇರುವೆಗಳ ಒಂದು ಸಾಲು ಗೋಚರಿಸಿತು. ಇರುವೆಗಳು ಇಲ್ಲಿ ಏಕೆ ಬಂದವು? ಎಂಬ ಕುತೂಹಲದಿಂದ ಬಟ್ಟೆಗಳನ್ನು ಸರಿಸಿ ನೋಡಿದಾಗ ಒಂದು ಚಿಕ್ಕ ಕಲ್ಲು ಸಕ್ಕರೆಯ ತುಂಡು ಅಲ್ಲಿ ಗೋಚರಿಸಿತು. ಅದಕ್ಕೆ ಈ ಇರುವೆಗಳು ಮುತ್ತಿಗೆ ಹಾಕಿದ್ದವು. ಹಾಗೆಯೇ ಇರುವೆಯ ಸಾಲನ್ನು ನೋಡುತ್ತ ಹೋದಾಗ ಕಿಟಕಿಯ ಆಚೆಯಿಂದ ಹಾದು ಬರುತ್ತಿದ್ದವು. ನಾನು ಹೊರಗಡೆ ಹೋಗಿ ನೋಡಿದಾಗ ಕಾಂಪೌಂಡಿನಲ್ಲಿ ಇರುವೆಯ ಸಾಲೇ ಪ್ರತ್ಯಕ್ಷವಾಯಿತು. ಆಶ್ಚರ್ಯವೆಂದರೆ ಈ ಇರುವೆಗಳಿಗೆ ಕಲ್ಲು ಸಕ್ಕರೆಯ ತುಂಡು ಹೇಗೆ ಗೋಚರಿಸಿತು? ಕಲ್ಲು ಸಕ್ಕರೆಯ ವಾಸನೆಯನ್ನು ಹಿಡಿದು ಒಂದೆರಡು ಇರುವೆಗಳು ಕಿಟಕಿಯ ಮೂಲಕ ಒಳಗೆ ಬಂದು ಬೀರುವಿನ ಬಾಗಿಲನ್ನು ಹತ್ತಿ ಅದರ ಸಂದಿನಲ್ಲಿ ಒಳಕ್ಕೆ ಹೋಗಿ ಕಲ್ಲುಸಕ್ಕರೆಯ ಚೂರನ್ನು ಪತ್ತೆ ಮಾಡಿರಬೇಕು! ಅನಂತರ ಅವು ಹೊರಗೆ ಹೋಗಿ ತಮ್ಮ ಸ್ನೇಹಿತರನ್ನು ಕರೆತಂದಿರಬೇಕು ಎಂದು ನಿಶ್ಚಯಿಸಿದೆ. ಆ ಇರುವೆಗಳಾದರೋ ತುಂಬಾ ಸಣ್ಣ ಜಾತಿಯವು. ಬೆರಳಿನಿಂದ ಮುಟ್ಟಿದರೆ ಸಾಕು, ಸತ್ತು ಹೋಗುತ್ತವೆ. ಅಷ್ಟು ಚಿಕ್ಕ ಇರುವೆಯ ಘ್ರಾಣಶಕ್ತಿ ಎಷ್ಟು ಚುರುಕಾಗಿರಬಹುದು! ಅದರ ಕಣ್ಣು, ಮೂಗು, ಬಾಯಿಗಳು ಎಲ್ಲಿವೆಯೆಂಬುದನ್ನು ಸಹ ಗೊತ್ತು ಮಾಡಲಾಗುವುದಿಲ್ಲ. ಕಲ್ಲು ಸಕ್ಕರೆಗೆ ವಾಸನೆಯಿರುತ್ತದೆಯೆ? ವಾಸನೆಯಿದ್ದಿರಬಹುದು. ಅದನ್ನರಿತು ಕಿಟಕಿಯ ಮೂಲಕ ಬಂದು ಬೀರುವನ್ನು ಹತ್ತಿ ಕಲ್ಲುಸಕ್ಕರೆಯನ್ನು ಪತ್ತೆ ಮಾಡಿದ ಇರುವೆಯ ಸಾಮರ್ಥ್ಯ ಆಶ್ಚರ್ಯಕರವಾದದ್ದು. ಅದರ ಮಿದುಳು ಎಲ್ಲಿರಬಹುದು? ಭಗವಂತನ ಅಪಾರವಾದ ಲೀಲಾಶಕ್ತಿಗೆ ಇದೊಂದು ಉದಾಹರಣೆ.

ಮದ್ಯದಲ್ಲಿ ಮದಶಕ್ತಿ ಹುಟ್ಟುವಂತೆ ಮನುಷ್ಯ ದೇಹದಲ್ಲಿ ಅವಯವಗಳ ಸಂಯೋಗದಿಂದ ಒಂದು ಶಕ್ತಿ ಹುಟ್ಟುತ್ತದೆಯೆಂದೂ ಅದೇ ಜೀವವೆಂದು ಹೇಳುವ

ನಾಸ್ತಿಕರು ಇದಕ್ಕೆ ಉತ್ತರವನ್ನು ಹೇಳಬೇಕು. ಸತ್ತಾಗ ಶವದಲ್ಲಿ ಅವಯವ ಸಂಯೋಗವಿದ್ದರೂ ಮದಶಕ್ತಿ ಹುಟ್ಟಿ ಬದುಕುವುದಿಲ್ಲ. ಇಂತಹ ಹಲವಾರು ಪ್ರಶ್ನೆಗಳಿಗೆ ಸ್ವಭಾವ ಎಂಬ ಒಂದೇ ಉತ್ತರವನ್ನು ಕೊಡುವ ನಾಸ್ತಿಕರು ಏನೆನ್ನುತ್ತಾರೆ? ''ಗೊತ್ತಿಲ್ಲ'' ಎಂಬುದಕ್ಕೆ ಸ್ವಭಾವ ಎಂಬ ಪದವು ಪರ್ಯಾಯವಾಗಿದೆ! ಹೀಗೆಯೇ ಜೇನನ್ನು ನಿರ್ಮಿಸುವ ಜೇನು ಹುಳದ ಶಕ್ತಿ, ಗಂಡು ನವಿಲಿನ ಸುಂದರವಾದ ಬಣ್ಣಬಣ್ಣದ ಪುಕ್ಕ ಮುಂತಾದದ್ದು ನಾಸ್ತಿಕ ದರ್ಶನಕ್ಕೆ ಸವಾಲಾಗಿರುತ್ತದೆ. ಕಾಗೆಗಳು ಕಪ್ಪಾಗಿರುವುದಕ್ಕೆ , ಗಿಳಿಗಳು ಹಸಿರಾಗಿರುವುದಕ್ಕೆ, ಕೊಕ್ಕರೆಗಳು ಬಿಳುಪಾಗಿರುವುದಕ್ಕೆ ಕಾರಣ ಯಾವುದು? ಕೊಕ್ಕರೆಯ ಕಾಲುಗಳನ್ನು ಉದ್ದವಾಗಿರಿಸಿ ಮೀನನ್ನು ಹಿಡಿಯಲು ಅನುಕೂಲವಾಗುವಂತೆ ಕತ್ತುಕೊಕ್ಕುಗಳನ್ನು ಉದ್ದವಾಗಿರಿಸುವ ಚಮತ್ಕಾರ ಯಾರಿಂದಾಯಿತು?

ಇನ್ನು ಆಕಾಶದತ್ತ ನೋಡಿದರೆ ವಿಚಾರಶೀಲನಿಗೆ ನಾನಾ ಅದ್ಭುತಗಳು ಗೋಚರಿಸುತ್ತವೆ. ಸೂರ್ಯನು ಏಕಪ್ರಕಾರವಾಗಿ ಕೋಟಿ ಕೋಟಿ ವರ್ಷಗಳಿಂದ ಉರಿಯುತ್ತ ಪ್ರಕಾಶವನ್ನು ನೀಡುತ್ತಿದ್ದಾನಷ್ಟೆ. ಅದಕ್ಕೆ ಬೇಕಾದ ಅಳತೆಯಿಲ್ಲದ ಇಂಧನವನ್ನು ಸೂರ್ಯಗೋಳದಲ್ಲಿ ಯಾರು ತುಂಬಿದರು? ಆಕಾಶದಲ್ಲಿ ನಿರಾಧಾರವಾಗಿ ಸೂರ್ಯನನ್ನೂ ಮೊದಲ್ಗೊಂಡು ಲಕ್ಷಾಂತರ ಜ್ಯೋತಿಗಳು ಮಿನುಗುತ್ತಿರುವುದು ಯಾವ ಬಲದಿಂದ? ಅಗಾಧವಾದ ಸಮುದ್ರಜಲ ಹೇಗೆ ನಿರ್ಮಿತವಾಯಿತು? ಅದೇ ಜಲವನ್ನು ಸೂರ್ಯನು ತನ್ನ ಕಿರಣಗಳಿಂದ ಹೀರಿ ಮೋಡಗಳನ್ನು ನಿರ್ಮಿಸುವುದು ಯಾರ ಪ್ರೇರಣೆಯಿಂದ? ವಾಯುವು ಕಾಲ - ಕಾಲಕ್ಕೆ ಮೋಡವನ್ನು ಎಳೆತಂದು ಒಬ್ಬ ಮಾಲಿಯಂತೆ ಭೂಮಿಯ ಮೇಲೆ ಸುರಿದು ಗಿಡ, ಮರ, ಬಳ್ಳಿಗಳನ್ನೂ , ಪ್ರಾಣಿಗಳನ್ನೂ ಪೋಷಿಸುವುದು ಯಾರ ಆಜ್ಞೆಯಿಂದ? ರೈತರು ಕಾಲುವೆಗಳನ್ನು ನಿರ್ಮಿಸಿ ಹೊಲ - ಗದ್ದೆಗಳಲ್ಲಿ ಪೈರು ಬೆಳೆಯುವಂತೆ ನೀರನ್ನು ಒದಗಿಸುವುದಕ್ಕಾಗಿ ನದಿಗಳೆಂಬ ಕಾಲುವೆಗಳನ್ನು ರಚಿಸಿದವರು ಯಾರು? ನದಿಯು ದೂರವಾಗಿದ್ದಾಗ ಜನರಿಗೆ ಉಪಯೋಗವಾಗಲೆಂದು ಭೂಗರ್ಭದಲ್ಲಿಯೂ ಜಲವನ್ನು ತುಂಬಿಸಿದವರು ಯಾರು? ಇತ್ಯಾದಿ ಪ್ರಶ್ನೆಗಳಿಗೆ ನಿರುತ್ತರವೇ ನಾಸ್ತಿಕರ ಉತ್ತರವಾಗಿರುತ್ತದೆ.

# ಜೀವಾತ್ಮ

ಈಗ ಜೀವಾತ್ಮನಿದ್ದಾನೆಂದೂ, ಜನ್ಮಾಂತರವಿದೆಯೆಂದೂ ಯುಕ್ತಿಯಿಂದ - ಅಂದರೆ ಅನುಮಾನ ಪ್ರಮಾಣದಿಂದ ಪರ್ಯಾಲೋಚಿಸಬೇಕಾಗಿದೆ. ಮದಶಕ್ತಿಯೇ ಜೀವವೆಂದು ಹೇಳತಕ್ಕವರು ವಿಚಾರಮಾಡಲಿ. ಜನರು - ಪ್ರಾಣಿಗಳು ಮದಶಕ್ತಿಯಿಂದ ಚೈತನ್ಯವನ್ನು ಪಡೆಯುತ್ತಾರೆಂದಾದರೆ ಗರ್ಭವಾಸದಲ್ಲಿ ಇರುವಾಗಲೇ ಸ್ಪಂದಿಸುವ ಶಕ್ತಿ ಗರ್ಭಕ್ಕೆ ಹೇಗೆ ಬರುತ್ತದೆ. ಅಷ್ಟು ಬೇಗನೆ ಮದಶಕ್ತಿ ಹುಟ್ಟುವುದಾದರೆ ಅದು ವೀರ್ಯಬಿಂದುವಿನಲ್ಲಿಯೇ ಇದ್ದಿರಬೇಕು. ಅದರಲ್ಲಿ ಯಾವ ಅವಯವಗಳಿಗೆ ಸಂಘರ್ಷವಾಗಿ ಚೈತನ್ಯವು ಉದಿಸೀತು? ಉದಿಸುವುದಾದರೆ ಮನುಷ್ಯರೇ ಮೊದಲಾದವರು ಸಾಯುವುದಕ್ಕೆ ಕಾರಣವೇನು? ಎಲ್ಲ ಅವಯವಗಳೂ ಬೆಳೆದು ಪುಷ್ಟವಾಗಿರುವಾಗ ಇನ್ನೂ ಬೆಳೆಯುತ್ತಿರುವಾಗಲೇ ಕೆಲವು ತರುಣರಿಗೆ ಇದ್ದಕ್ಕಿದ್ದಂತೆ ಸಾವು ಬರುತ್ತದೆ. ಅವರ ಹೃದಯ, ಶ್ವಾಸಕೋಶಗಳು ಗಪ್ಪನೆ ತಮ್ಮ ಕೆಲಸವನ್ನು ನಿಲ್ಲಿಸಿಬಿಡುತ್ತವೆ. ಹೆಣವನ್ನು ಅಲ್ಲಾಡಿಸಿದರೂ ಚೈತನ್ಯ ಬರುವುದೇ ಇಲ್ಲ. ಅದಕ್ಕೆ ಕಾರಣವೇನು? ಆದ್ದರಿಂದ ಮದಶಕ್ತಿಗೆ ಅತಿರಿಕ್ತವಾಗಿ ಯಾವುದೋ ಒಂದು ವಸ್ತು ಪ್ರಾಣಿಗಳ ದೇಹದಲ್ಲಿ ಇದೆಯೆಂದು ಒಪ್ಪಬೇಕಾಗುತ್ತದೆ. ಅದೇ ದೇಹಾತಿರಿಕ್ತವಾದ ಜೀವ ಎನ್ನುವುದು ಯುಕ್ತಿಯುಕ್ತವಾದದ್ದು.

ಹಸುವಿನ ಕರು ಹುಟ್ಟಿದ ಕೆಲವು ನಿಮಿಷಗಳಲ್ಲಿಯೇ ಎದ್ದು ನಿಂತು ತಾಯಿಯ ಕೆಚ್ಚಲಿಗೆ ಬಾಯಿಯನ್ನೊಡ್ಡಿ ಹಾಲನ್ನು ಹೀರತೊಡಗುತ್ತದೆ. ಕೆಚ್ಚಲಿನಲ್ಲಿ ಹಾಲು ಇದೆಯೆಂದೂ , ಅದನ್ನು ಎಳೆದು ಕುಡಿದರೆ ತನ್ನ ಹಸಿವು ನೀಗುವುದೆಂದೂ ಅದಕ್ಕೆ ಹೇಗೆ ಗೊತ್ತಾಗುತ್ತದೆ? ಯಾರು ಹೇಳಿಕೊಡುತ್ತಾರೆ? ಈ ತಿಳುವಳಿಕೆ ಕರುವಿಗೆ ಪೂರ್ವಜನ್ಮದ ಸಂಸ್ಕಾರದಿಂದ ಬಂದದ್ದೆಂದು ನಿಶ್ಚಯಿಸಬಹುದು. ಇನ್ನು ಮನುಷ್ಯರು ಹುಟ್ಟುವಾಗ ಕುಂಟನೋ , ಕುರುಡನೋ ಮೂಕನೋ ಆಗಿ ಹುಟ್ಟುವುದುಂಟಷ್ಟೆ. ಇದು ಜನ್ಮಾಂತರದ ಕರ್ಮದ ಫಲವೆಂದು ಹೇಳಬೇಕಾಗುತ್ತದೆ. ಈ ಜನ್ಮದಲ್ಲಿ ಕೆಲವರು

ನಾನಾ ಬಗೆಯ ರೋಗಗಳನ್ನು, ವಿಪತ್ತುಗಳನ್ನು ಅನುಭವಿಸಬೇಕಾಗುತ್ತದೆ. ಇನ್ನೂ ಕೆಲವರು ಆರೋಗ್ಯವಂತರೂ, ಸುಖಿಗಳೂ ಆಗಿರುತ್ತಾರೆ. ಕೆಲವರು ಅಲ್ಪಾಯುಷ್ಕರೂ, ಕೆಲವರು ದೀರ್ಘಾಯುಷ್ಕರೂ ಆಗಿರುತ್ತಾರಷ್ಟೆ. ಇಂತಹ ಹಲವಾರು ವಿಷಯಗಳಿಗೆ ಜನ್ಮಾಂತರದ ಪಾಪ-ಪುಣ್ಯಗಳೇ ನಿಮಿತ್ತವೆಂದು ಅಂಗೀಕರಿಸುವುದು ಅನಿವಾರ್ಯವೇ ಸರಿ . ತಪ್ಪು ಮಾಡಿದವನಿಗೆ ದಂಡನೆ ಆಗಲೇಬೇಕು. ಉತ್ತಮ ಕಾರ್ಯಗಳನ್ನು ಮಾಡಿದವನಿಗೆ ಯೋಗ್ಯವಾದ ಫಲವು ದೊರಕಲೇಬೇಕು. ಇದು ಲೋಕದಲ್ಲಿ ಕಂಡುಬರುವ ನಿಯಮ. ಆ ಫಲಗಳು ದೊರೆಯದೇ ಮೃತನಾಗಿ ಬಿಟ್ಟರೆ ಪಾಪ-ಪುಣ್ಯಗಳೆಲ್ಲವೂ ನಿಷ್ಫಲವಾಗಿ ಬಿಡುತ್ತವೆ. ಆದ್ದರಿಂದ ಜನ್ಮಾಂತರವನ್ನು ಒಪ್ಪುವುದು ಸಯುಕ್ತಿಕವಾದದ್ದು.

ಇಲಿಗಳು ಬೆಕ್ಕನ್ನು ಕಂಡೊಡನೆ ಹೆದರಿ ಓಡುತ್ತವೆ. ಅವು ಯಾವತ್ತೂ ಬೆಕ್ಕನ್ನು ನೋಡಿರುವುದೇ ಇಲ್ಲ. ಹೀಗಿದ್ದರೂ ಇಲಿಗಳಿಗೆ ಏಕೆ ಭಯವಾಗುತ್ತದೆ? ಹಸು, ಎಮ್ಮೆ ಮೊದಲಾದವು ಕಾಡಿನಲ್ಲಿ ಹುಲಿಯ ಗರ್ಜನೆಯನ್ನು ಕೇಳಿದರೆ ಸಾಕು ಅಥವಾ ದೂರದಲ್ಲಿ ನೋಡಿದರೆ ಸಾಕು, ಓಡಿ ಹೋಗುತ್ತವೆ. ಅವುಗಳ ಭಯಕ್ಕೆ ನಿಮಿತ್ತವೇನು? ಹುಲಿಗಳು ತಮ್ಮನ್ನು ಕೊಲ್ಲುತ್ತವೆ ಎಂದು ಅವುಗಳಿಗೆ ಹೇಗೆ ಗೊತ್ತಾಗುತ್ತದೆ? ಇವೇ ಮೊದಲಾದ ಪ್ರಶ್ನೆಗಳಿಗೆ ಜನ್ಮಾಂತರವಿದೆಯೆಂದು ಒಪ್ಪುವುದೇ ಸಮಂಜಸವಾದ ಉತ್ತರವಾಗಿರುತ್ತದೆ. ಒಬ್ಬನು ಬಾಲಕನಾಗಿದ್ದಾಗಲೇ ತುಂಬಾ ಬುದ್ಧಿಶಾಲಿಯಾಗಿರುತ್ತಾನೆ. ಇನ್ನೊಬ್ಬನು ಗಣಿತದಲ್ಲಿ, ಮತ್ತೊಬ್ಬನು ವಿಜ್ಞಾನದಲ್ಲಿ, ಇನ್ನೊಬ್ಬನು ಇತಿಹಾಸದಲ್ಲಿ ತುಂಬಾ ಆಸಕ್ತಿಯನ್ನೂ, ಬುದ್ಧಿ ಚಾತುರ್ಯವನ್ನೂ ಪಡೆದಿರುತ್ತಾನೆ. ಮತ್ತೊಬ್ಬನು ಯಾವ ವಿದ್ಯೆಯಲ್ಲಿಯೂ ಆಸಕ್ತಿಯನ್ನೂ ತೋರಿಸದೇ ದಡ್ಡನಾಗಿರುತ್ತಾನೆ. ಇತ್ಯಾದಿ ಪರಿಸ್ಥಿತಿಗಳಿಗೆ ಜನ್ಮಾಂತರವೇ ಸಮಂಜಸವಾದ ಉತ್ತರವನ್ನು ಒದಗಿಸಬಲ್ಲದು.

# ಶಬ್ದಪ್ರಾಮಾಣ್ಯ

ಶಬ್ದವೆಂದರೆ ಆಪ್ತವಾಕ್ಯ. ಯಥಾರ್ಥವಾದ ಸತ್ಯವನ್ನು ಹೇಳತಕ್ಕವನು ಆಪ್ತ. ಇದನ್ನು ಪ್ರಮಾಣವೆಂದು ನಾವು ಒಪ್ಪಲೇಬೇಕಾಗುತ್ತದೆ. ನಮ್ಮ ಪ್ರತಿದಿನದ ವ್ಯವಹಾರವೆಲ್ಲವೂ ಇದರಿಂದಲೇ ನಡೆಯುತ್ತದೆ. ಬೆಳಗಾದರೆ ಪತ್ರಿಕೆಗಳನ್ನೋದಿ ದೂರದಲ್ಲಿ ನಡೆಯುವ ಅನೇಕ ವಿಷಯಗಳನ್ನು ತಿಳಿಯುತ್ತೇವೆ. ಪುಸ್ತಕಗಳನ್ನೋದಿ ಬಹಳ ವಿಷಯಗಳನ್ನು ಗ್ರಹಿಸುತ್ತೇವೆ. ಮದುವೆಯ ಆಮಂತ್ರಣ ಪತ್ರಿಕೆಯನ್ನು ಓದಿ ನಿರ್ದಿಷ್ಟವಾದ ಸ್ಥಳದಲ್ಲಿ ಆ ಮದುವೆಯ ಕಾರ್ಯಕ್ರಮವು ನಡೆಯುವುದೆಂದು ನಿಶ್ಚಯಿಸಿಕೊಳ್ಳುತ್ತೇವೆ. ಇದೆಲ್ಲವೂ ಶಬ್ದಪ್ರಾಮಾಣ್ಯವನ್ನು ಅವಲಂಬಿಸಿದೆಯೆಂಬುದು ಸ್ಪಷ್ಟವಾಗಿದೆ. ಇದನ್ನು ಅಲ್ಲಗಳೆಯಲು ಯಾರಿಂದಲೂ ಶಕ್ಯವಾಗದು.

ಈಶ್ವರನಿದ್ದಾನೆಂಬುದಕ್ಕೆ ಇದು ಶ್ರೇಷ್ಠವಾದ ಒಂದು ಪ್ರಮಾಣವಾಗಿರುತ್ತದೆ. ನಮ್ಮ ನಾಲ್ಕೂ ವೇದಗಳೂ, ಅವುಗಳನ್ನು ಅವಲಂಬಿಸಿ ರಚಿತವಾದ ರಾಮಾಯಣ, ಮಹಾಭಾರತ, ಭಾಗವತಾದಿ ಗ್ರಂಥಗಳು ದೇವರ ಅಸ್ತಿತ್ವವನ್ನು ಘಂಟಾಘೋಷವಾಗಿ ತಿಳಿಸಿಕೊಡುತ್ತವೆ. ಇವುಗಳಲ್ಲಿ ಮುಖ್ಯವಾದದ್ದು ವೇದ. ವೇದವೆಂದರೆ ಜ್ಞಾನ ಅಥವಾ ಜ್ಞಾನಕ್ಕೆ ಕಾರಣವಾದ ಗ್ರಂಥ ಎಂದರ್ಥ. ಈಶ್ವರಪ್ರೋಕ್ತವಾದ್ದರಿಂದ ವೇದವು ಪ್ರಮಾಣ ಗ್ರಂಥ. ಆದ್ದರಿಂದಲೇ ವೇದವನ್ನು ಅಪೌರುಷೇಯ ಎನ್ನುತ್ತಾರೆ. ಈ ಶಬ್ದಕ್ಕೆ ಎರಡು ಬಗೆಯ ಅರ್ಥಗಳುಂಟು. ಅಲ್ಪಜ್ಞಾನಿಗಳಾದ ಮಾನವರಿಂದ ಇದು ರಚಿತವಾದುದಲ್ಲ. ವೇದವನ್ನು ಯಾರೂ ರಚಿಸಿಲ್ಲ. ಇದು ನಿತ್ಯವಾದದ್ದು. ವೇದವು ಪರಮಾತ್ಮನ ಬಾಯಿಯಿಂದ ನಿರ್ಗಮಿಸಿತೆಂದು ಆತನೂ ಸಹ ಇದನ್ನು ರಚಿಸಲಿಲ್ಲವೆಂದೂ ಹೇಳಬಹುದು. **''ತಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತತ್ ಯತ್ ಋಗ್ವೇದೋ ಯಜುರ್ವೇದಃ ಸಾಮವೇದಃ ಅಥರ್ವಣಶ್ಚ''** ಎಂದು ಶ್ರುತಿಯೇ ಹೇಳಿಕೊಂಡಿದೆ. ವೇದವು ಪರಮಾತ್ಮನ ನಿಃಶ್ವಸಿತ. ಯಾವ ಪ್ರಯತ್ನವೂ ಇಲ್ಲದೇ ಉಸಿರು ಬಿಡುವಂತೆ ಆತನ ಮುಖದಿಂದ ಹೊರಬಂದಿತು ಎಂದು

ಅಭಿಪ್ರಾಯ. ವಸಿಷ್ಠ, ವಾಮದೇವ, ವಿಶ್ವಾಮಿತ್ರಾದಿ ಋಷಿಗಳು ಕಠಿಣವಾದ ತಪಸ್ಸಿನಲ್ಲಿ ತೊಡಗಿ ಸಮಾಧಿ ಸ್ಥಿತಿಯಲ್ಲಿರುವಾಗ ಅವರಿಗೆ ವೇದಗಳು ಹೊಳೆದವು. ಅವರು ತಮ್ಮ ಮುಖದಿಂದ ಉಚ್ಚರಿಸಿದರು. ಋಷಿಗಳೂ ಸಹ ಇದನ್ನು ರಚಿಸಲಿಲ್ಲ. ಈ ಮಾತನ್ನು ವೇದಾಂಗವಾದ ನಿರುಕ್ತವನ್ನು ರಚಿಸಿದ ಯಾಸ್ಕ ಮುನಿಗಳೇ ಹೇಳಿದ್ದಾರೆ.

ಋಷಿಗಳೆಂದರೆ ಯಾರು - **"ತದ್ಯದೇನಾನ್ ತಪಸ್ಯಮಾನಾನ್ ಬ್ರಹ್ಮಸ್ವಯಂಭು ಅಭ್ಯಾನರ್ಷತ್, ತತ್ ತೇ ಋಷಯೋ ಅಭವನ್, ತದೃಷೀಣಾಂ ಋಷಿತ್ವಮ್" ನಿರುಕ್ತನೆನಘಂಟು "** (ಕಾಂಡ - ೨-೩-೧೨)

ತಪಸ್ಸು ಮಾಡುತ್ತಿದ್ದ ಈ ಜನರ ಬಳಿಗೆ ಋಗ್ಯಜುಃಸಾಮಗಳೆಂಬ ಕೃತಕವಲ್ಲದ ವೇದಗಳು ಅಭ್ಯಾನರ್ಷತ್ = ಬಂದು ಸೇರಿದವು. ಆದ್ದರಿಂದ ಇವರು ಋಷಿಗಳು ಎಂದು ತಾತ್ಪರ್ಯ. ಬ್ರಹ್ಮವೆಂದರೆ ವೇದ. ಇದು ಸ್ವಯಂಭು, ತಾನಾಗಿಯೇ ಇದ್ದದ್ದು ಕೃತಕವಲ್ಲವೆಂದರ್ಥ. ಋಷೀ-ಗತೌ ಎಂಬ ಧಾತುವಿನಿಂದ ಋಷಿ ಶಬ್ದವು ನಿಷ್ಪನ್ನವಾಗಿದೆ. ತಪಸ್ಸು ಮಾಡುತ್ತಿದ್ದ ಋಷಿಗಳಿಗೆ ಅನಾದಿಯಾದ ವೇದಗಳು ಹೊಳೆದವು. ಅವರು ಅವುಗಳನ್ನು ರಚಿಸಲಿಲ್ಲ ಎಂದು ಕೆಲವರ ಆಶಯ. ವೇದಗಳನ್ನು ಭಗವಂತನು ರಚಿಸಿದನು. ನಮ್ಮಂತಹ ಅಲ್ಪಜ್ಞರಾದ ಪುರುಷರು ರಚಿಸಲಿಲ್ಲ. ಆದ್ದರಿಂದ ವೇದವು ಅಪೌರುಷೇಯ ಎಂದು ನೈಯಾಯಿಕರು ಹೇಳುತ್ತಾರೆ. **"ಏಕವಿಂಶತಿಧಾ ಬಾಹ್ವೃಚ್ಯಂ. ಏಕಶತಮ್ ಅಧ್ವರ್ಯುಶಾಖಾಃ. ಸಹಸ್ರವರ್ತ್ಮಾ ಸಾಮವೇದಃ. ನವಧಾ ಅಥರ್ವಣೋ ವೇದಃ "** (ಋಗ್ವೇದವು ಇಪ್ಪತ್ತೊಂದು ಶಾಖೆಯುಳ್ಳದ್ದು. ಯಜುರ್ವೇದದಲ್ಲಿ ನೂರು ಶಾಖೆಗಳಿವೆ. ಸಾಮವೇದದಲ್ಲಿ ಒಂದು ಸಾವಿರ ಶಾಖೆಗಳುಂಟು. ಅಥರ್ವಣ ವೇದದಲ್ಲಿ ಒಂಬತ್ತು ಭೇದಗಳಿವೆ ಎಂದು ಮಹಾಭಾಷ್ಯಕಾರರಾದ ಪತಂಜಲಿ ಮಹರ್ಷಿಗಳು ಹೇಳಿದ್ದಾರೆ. ಇಷ್ಟು ವಿಶಾಲವಾದದ್ದು ವೇದ. ಪತಂಜಲಿ ಮುನಿಗಳೇ ಇನ್ನೊಂದು ಸ್ಥಳದಲ್ಲಿ - **"ನಿತ್ಯೋ ವೇದಃ, ನ ಹಿ ವೇದಾಃ ಕ್ರಿಯಂತೇ "** ಎಂದಿದ್ದಾರೆ.

ಅಲ್ಲದೆ ವೇದಗಳ ಸ್ವರೂಪವನ್ನು ಪರಿಶೀಲಿಸಿದರೂ ಈ ಅಭಿಪ್ರಾಯಕ್ಕೆ ನಾವು

ಬರಬೇಕಾಗುತ್ತದೆ. ವೇದದಲ್ಲಿ ಉದಾತ್ತ, ಅನುದಾತ್ತ, ಸ್ವರಿತ ಇತ್ಯಾದಿಯಾಗಿ ಏಳು ಬಗೆಯ ಸ್ವರಗಳುಂಟು. ಈ ಸ್ವರಗಳೆಲ್ಲವೂ ಗೊತ್ತಾದ ನಿಯಮಗಳಿಗೆ ಒಳಪಟ್ಟಿವೆ. ತಮಗೆ ತೋರಿದಂತೆ ಸ್ವರವನ್ನು ಯಾರೂ ಹಾಕಿಲ್ಲ. ಮನುಷ್ಯರು ರಚಿಸುವುದಾದರೆ ತಾವು ಆಡುವ ಭಾಷೆಯಲ್ಲಿಯೇ ಗದ್ಯಪದ್ಯಗಳನ್ನು ರಚಿಸುವುದು ಸಹಜ. ಉದಾತ್ತಾದಿ ಸ್ವರ ವಿಶಿಷ್ಟವಾಗಿ ಯಾರೂ ಮಾತನಾಡುವುದಿಲ್ಲ. ಲೋಕದಲ್ಲಿ ಯಾರೂ ಆಡದಿರುವ ಮಾತಿನಿಂದ ಇಷ್ಟು ವಿಶಾಲವಾದ ವೇದಗಳನ್ನು ಯಾವ ಮನುಷ್ಯ ರಚಿಸಿಯಾನು? ಅಲ್ಲದೆ ವೇದದಲ್ಲಿ ಜರ್ಭರೀ, ತುರ್ಫರೀತು, ಮರಾಯು ಇತ್ಯಾದಿ ಶಬ್ದಗಳ ಪ್ರಯೋಗವಿದೆ. ಬಳಕೆಯಲ್ಲಿಲ್ಲದ ಶಬ್ದಗಳನ್ನು ಯಾರು ಪ್ರಯೋಗಿಸುತ್ತಾರೆ? ಅಲ್ಲದೆ ವೇದಗಳು ಅತ್ಯಂತ ಪ್ರಾಚೀನವಾದವು. ಇವುಗಳ ಕಾಲವನ್ನು ಪಾಶ್ಚಾತ್ಯ ವಿದ್ವಾಂಸರು ಕೇವಲ ಊಹಿಸಿದ್ದಾರೆಯೇ ಹೊರತು ಅವರಿಗೆ ನಿಶ್ಚಯಿಸಲಾಗಲಿಲ್ಲ. ಕ್ರಿಸ್ತಪೂರ್ವ ಮೂರು ಸಾವಿರ ವರ್ಷಗಳಿಂದ ಕ್ರಿಸ್ತಪೂರ್ವ ಹನ್ನೆರಡು ಸಾವಿರ ವರ್ಷಗಳವರೆಗೂ ಇದರ ಕಾಲವನ್ನು ಒಯ್ದಿದ್ದಾರೆ. ಅದೂ ನಿಶ್ಚಯವಲ್ಲ. ಹೀಗೆ ಅನಾದಿಕಾಲದಿಂದ ವೇದಗಳು ಬಳಕೆಯಲ್ಲಿರುವುದರಿಂದಲೂ ಕರ್ತೃವಿನ ಹೆಸರು ಇಂದಿನವರೆಗೂ ತಿಳಿದುಬಂದಿಲ್ಲವಾದ್ದರಿಂದಲೂ ವೇದಗಳು ಅಪೌರುಷೇಯಗಳೆನ್ನುವುದು ವಸ್ತುಸ್ಥಿತಿಯೇ ಆಗಿದೆ. ಅಲ್ಲದೆ ಅಷ್ಟು ಪ್ರಾಚೀನಕಾಲದಲ್ಲಿಯೂ ವೈಜ್ಞಾನಿಕವಾದ ಎಷ್ಟೋ ವಿಷಯಗಳು ವೇದದಲ್ಲಿ ಕಂಡುಬರುತ್ತವೆ.

೧) ನಿರುಕ್ತದಲ್ಲಿ ಹೀಗಿದೆ - **''ಸುಷುಮ್ನಃ ಸೂರ್ಯರಶ್ಮಿಃ ಚಂದ್ರಮಾ ಗಂಧರ್ವಃ ಇತ್ಯಪಿ ನಿಗಮೋ ಭವತಿ''** (ಯಜುರ್ವೇದ ೧೮-೪೦)

ಇದರ ಪ್ರಕಾರ ಸುಷುಮ್ನಾ ಎಂಬ ಸೂರ್ಯರಶ್ಮಿಯು ಚಂದ್ರನಲ್ಲಿ ಬಂದು ಸೇರುತ್ತದೆ ಎಂದರ್ಥ. ಆದ್ದರಿಂದ ಚಂದ್ರನನ್ನು ಗಂಧರ್ವ ಎಂದು ವೇದದಲ್ಲಿ ವರ್ಣಿಸಿದೆಯಂತೆ. ವ್ಯಾಖ್ಯಾನಕಾರರು ''ಸೂರ್ಯನ ಕಿರಣಗಳನ್ನು ಚಂದ್ರನು ಪಡೆದು ಪ್ರಕಾಶಿಸುತ್ತಾನೆ. ಅವನು ಸ್ವಯಂಪ್ರಕಾಶನಲ್ಲ'' ಎಂದು ಬರೆದಿದ್ದಾರೆ. ಇದಕ್ಕೆ ಆಧಾರವಾಗಿ ಸುಪ್ರಸಿದ್ಧ ಜ್ಯೋತಿಷ್ಕರಾದ ಭಾಸ್ಕರಾಚಾರ್ಯರ ಈ ವಚನವನ್ನು ಉದಾಹರಿಸಿದ್ದಾರೆ.

**"ತರಣಿಕಿರಣಸಂಗಾದೇಷ ಪೀಯೂಷಪಿಂಡೋ**
**ದಿನಕರದಿಶಿ ಚಂದ್ರಃ ಚಂದ್ರಿಕಾಭಿಶ್ಚಕಾಸ್ತಿ।**
**ತದಿತರದಿಶಿ ಬಾಲಾಕುಂತಲಶ್ಯಾಮಲಶ್ರೀಃ**
**ಘಟ ಇವ ನಿಜಮೂರ್ತಿಶ್ಛಾಯಯೈವಾತಪಸ್ಥಃ ॥"**

ಚಂದ್ರನು ಮಣ್ಣಿನ ಗಡಿಗೆಯಂತೆ ಪ್ರಕಾಶರಹಿತನಾಗಿದ್ದಾನೆ. ಆಕಾಶದಲ್ಲಿ ಸಂಚರಿಸುವಾಗ ಸೂರ್ಯಕಿರಣಗಳು ಚಂದ್ರನ ಮೇಲೆ ಬೀಳುತ್ತವೆ. ಅವು ಭೂಮಿಯ ಮೇಲೆ ಪ್ರತಿಬಿಂಬವನ್ನು ಚಿಮ್ಮುತ್ತವೆ. ಅದೇ ಬೆಳದಿಂಗಳು. ಚಂದ್ರನ ಹಿಂಭಾಗವು ಪ್ರಕಾಶವಲ್ಲದ್ದರಿಂದ ಗಡಿಗೆಯಂತೆ ಕಪ್ಪಾಗಿಯೇ ಇರುತ್ತದೆಯೆಂದು ಈ ಶ್ಲೋಕದ ತಾತ್ಪರ್ಯ.

೨) ಸೂರ್ಯನಿಗೆ ಉದಯಾಸ್ತಗಳಿಲ್ಲವೆಂದೂ , ಯಾವಾಗ ಎಲ್ಲಿ ಕಾಣಿಸುವನೋ ಅಲ್ಲಿ ಉದಯ, ಎಲ್ಲಿ ಕಾಣಿಸುವುದಿಲ್ಲವೋ ಅಲ್ಲಿ ಅಸ್ತಮಯವೆಂದು ಹೇಳಿದೆ. ಭಾಷ್ಯಕಾರರು ಅದನ್ನು ವಿವರಿಸಿದ್ದಾರೆ - **"ಉದಯಶ್ಚ ನಾಮ ಸವಿತುಃ ತನ್ನಿವಾಸಿನಾಂ ಪ್ರಾಣಿನಾಂ ಚಕ್ಷುರ್ಗೋಚರತಾಪತ್ತಿಃ। ತದತ್ಯಯಶ್ಚ ಅಸ್ತಮನಂ। ನ ಪರಮಾರ್ಥತಃ ಉದಯಾಸ್ತಮಾನೇ ಸ್ತಃ"** (ಛಾಂದೋಗ್ಯ : ಶಾಂ. ಭಾ. ೩-೧೧-೪)

ವ್ಯಾಖ್ಯಾನದಲ್ಲಿ ಈ ಶ್ಲೋಕವನ್ನು ಬರೆದಿದ್ದಾರೆ -

**"ಯೈರ್ಯತ್ರ ದೃಶ್ಯತೇ ಭಾಸ್ವಾನ್ ಸ ತೇಷಾಮುದಯಃ ಸ್ಮೃತಃ ।**
**ತಿರೋಭಾವಂ ಚ ಯತ್ರೈತಿ ತದೇವಾಸ್ತಮಯಂ ರವೇಃ ॥**
**ನೈವಾಸ್ತಮನಮರ್ಕಸ್ಯ ನೋದಯಃ ಸರ್ವದಾ ಸತಃ ।**
**ಉದಯಾಸ್ತಮನೇ ನಾಮ ದರ್ಶನಾದರ್ಶನಂ ರವೇಃ ॥"** ( ಛಾಂದೋಗ್ಯ (ಆನಂದಗಿರಿ)

೩) **"ಪೃಥಿವೀಛಾಯಾಂ ಹಿ ಶಾರ್ವರಂ ತಮ ಆಚಕ್ಷತೇ "** (ಬೃಹದಾರಣ್ಯಕ ೯-೨-೧೧ ಶಾಂ. ಭಾ. )

ಇದರ ವ್ಯಾಖ್ಯಾನದಲ್ಲಿ ಈ ಶ್ಲೋಕವಿದೆ -

**''ಉದ್ಧೃತ್ಯ ಪೃಥಿವೀಛಾಯಾಂ ನಿರ್ಮಿತಂ ಮಂಡಲಾಕೃತಿ।**

**ಸ್ವರ್ಭಾನೋಸ್ತು ಬೃಹತ್‌ಸ್ಥಾನಂ ತೃತೀಯಂ ಯತ್ತಮೋಮಯಂ॥''**

**ತಾತ್ಪರ್ಯ** :- ಭೂಮಿಯ ನೆರಳು ಸೂರ್ಯಚಂದ್ರರನ್ನಲ್ಲದೆ ಬೇರೆಯಾಗಿ ಮಂಡಲಾಕೃತಿಯಿಂದ ಇರುವುದೇ ರಾಹುವಿನ ಮೂರನೆಯ ಸ್ಥಾನವಾಗಿದೆ. - ಆನಂದಗಿರಿ

೧) ವೇದದ ವಿಷಯದಲ್ಲಿ ಶ್ರೀ ಶಂಕರಾಚಾರ್ಯರು ಹೇಳಿರುವ ಈ ಮಾತುಗಳು ಗಮನಾರ್ಹವಾದವು - **''ನಿಯತರಚನಾವತೋ ವಿದ್ಯಮಾನಸ್ಯೈವ ವೇದಸ್ಯ ಅಭಿವ್ಯಕ್ತಿಃ ಪುರುಷನಿಃಶ್ವಾಸವತ್ , ನ ಚ ಪುರುಷಬುದ್ಧಿಪ್ರಯತ್ನಪೂರ್ವಕಃ ಅತಃ ಪ್ರಮಾಣನಿರಪೇಕ್ಷ ಏವ ಸ್ವಾರ್ಥೇ...''** (ಬೃಹದಾರಣ್ಯಕ ೨-೪-೧೦)

**ಅರ್ಥ** :- ಆನುಪೂರ್ವೀವಿಶಿಷ್ಟವಾಗಿ ಮೊದಲೇ ಇದ್ದ ವೇದವು ಮನುಷ್ಯನ ನಿಃಶ್ವಾಸದಂತೆ ಪರಮಾತ್ಮನಿಂದ ಅಭಿವ್ಯಕ್ತವಾಯಿತು. ಅದು ಯಾವನೊಬ್ಬ ಪುರುಷನ ಬುದ್ಧಿ- ಪ್ರಯತ್ನಗಳಿಂದ ರಚಿತವಾದದ್ದಲ್ಲ. ಆದ್ದರಿಂದ ವೇದವು ಸ್ವತಃ ಪ್ರಮಾಣ ಗ್ರಂಥವಾಗಿದೆ.

೨) **''ನ ಹಿ ಈದೃಶಸ್ಯ ಶಾಸ್ತ್ರಸ್ಯ ಋಗ್ವೇದಾದಿಲಕ್ಷಣಸ್ಯ ಸರ್ವಜ್ಞಗುಣಾನ್ವಿತಸ್ಯ ಸರ್ವಜ್ಞಾದನ್ಯತಃ ಸಂಭವೋಸ್ತಿ''** (ಸೂ. ಭಾ. ೧-೧-೩)

**ಅರ್ಥ** :- ಋಗ್ವೇದಾದಿ ಶಾಸ್ತ್ರವು ಸರ್ವಾರ್ಥಪ್ರಕಾಶನಸಮರ್ಥವಾಗಿ ಸರ್ವಜ್ಞಸದೃಶವಾಗಿದೆ. ಇಂತಹ ವೇದವು ಸರ್ವಜ್ಞನಲ್ಲದೇ ಇನ್ನೊಬ್ಬನಿಂದ ಉತ್ಪನ್ನವಾಗಲಾರದು.

೩) **''ಏವಂ ಪ್ರತ್ಯಕ್ಷಾದಿಭಿಃ ಪ್ರಮಾಣೈಃ ನ ಪರಃ ಪ್ರತ್ಯಾಯಯಿತುಂ ಶಕ್ಯಃ। ಆಗಮೇನ ತು ಶಕ್ಯತ ಏವ ಪ್ರತ್ಯಾಯಯಿತುಮ್ ॥''** (ಕೇನ ಪದಭಾಷ್ಯ ೧-೩)

ಪರಮಾತ್ಮನ ನಿಜ ಸ್ವರೂಪವನ್ನು ಪ್ರತ್ಯಕ್ಷಾದಿಪ್ರಮಾಣಗಳಿಂದ ತಿಳಿಸಿಕೊಡಲು

ಶಕ್ಯವಿಲ್ಲ. ಆದರೆ ವೇದಪ್ರಮಾಣದಿಂದ ತಿಳಿಸಿಕೊಡಲು ಶಕ್ಯವೇ ಆಗಿದೆ.

೪) **"ಆಗಮಮಾತ್ರಂ ಸಮಧಿಗಮ್ಯ ಏವ ತ್ವಯಮರ್ಥೋ ಧರ್ಮವತ್"** (ಸೂ. ಭಾ. ೨-೧-೬)

**ಅರ್ಥ** :- ಬ್ರಹ್ಮಸ್ವರೂಪವು ವೇದದಿಂದ ಮಾತ್ರ ತಿಳಿಯಬಹುದಾದದ್ದು ಧರ್ಮವಿದ್ದಂತೆ. ಧರ್ಮದ ಸ್ವರೂಪವನ್ನು ತರ್ಕದಿಂದ ನಿಶ್ಚಯಿಸಲಾಗುವುದಿಲ್ಲ.

೫) ದೇಹಾತಿರಿಕ್ತನಾದ ಆತ್ಮನಿದ್ದಾನೆ ಎಂದು ಆಚಾರ್ಯರ ಸಿದ್ಧಾಂತವಾಗಿದೆ- **"ನಿರ್ಗುಣಮಪಿ ಸದ್ಬ್ರಹ್ಮ ನಾಮರೂಪಗತೈಃ ಗುಣೈಃ ಸಗುಣಮುಪಾಸನಾರ್ಥಂ ತತ್ರ ತತ್ರ ಉಪದಿಶ್ಯತೇ. ಸರ್ವಗತಸ್ಯಾಪಿ ಬ್ರಹ್ಮಣಃ ಉಪಲಂಭಾರ್ಥಂ ಸ್ಥಾನವಿಶೇಷೋ ನ ವಿರುಧ್ಯತೇ. ಸಾಲಗ್ರಾಮ ಇವ ವಿಷ್ಣೋಃ"** (ಸೂ. ಭಾ. ೧-೨-೧೪)

**ಅರ್ಥ**:- ಬ್ರಹ್ಮವು ನಿರ್ಗುಣವಾಗಿದ್ದರೂ ಸಹ ನಾಮರೂಪಸಂಬಂಧಿಗಳಾದ ಗುಣಗಳಿಂದ ಸಹಿತವಾಗಿ ಅಲ್ಲಲ್ಲಿ ಉಪದಿಷ್ಟವಾಗಿರುತ್ತದೆ. ಬ್ರಹ್ಮವು ಸರ್ವಗತವಾಗಿದ್ದರೂ ಸಹ ಸಾಲಗ್ರಾಮದಲ್ಲಿ ವಿಷ್ಣು ಹೇಗೋ ಹಾಗೆ ಉಪಾಸನೆಗೋಸ್ಕರ ಸ್ಥಾನವಿಶೇಷವನ್ನು ಹೇಳಿರುವುದು ವಿರುದ್ಧವಲ್ಲ.

ಬ್ರಹ್ಮವು ನಿರಾಕಾರವೂ, ನಿರ್ಗುಣವೂ ಆದದ್ದು. ವಿಷ್ಣು, ಬ್ರಹ್ಮ, ಶಿವ ಮುಂತಾದ ದೇವತೆಗಳ ನಾಮರೂಪಗಳು. ಭಕ್ತರ ಉಪಾಸನೆಗೋಸ್ಕರ ಕಲ್ಪಿತವಾದವು. ಸಾಲಗ್ರಾಮದಲ್ಲಿ ವಿಷ್ಣು, ಶಿವಲಿಂಗದಲ್ಲಿ ಶಿವ ಇತ್ಯಾದಿ ಭಾವನೆಗಳಿಂದ ಭಕ್ತರು ಪೂಜೆ, ಧ್ಯಾನ ಮುಂತಾದುದನ್ನು ನಡೆಸಲು ಸಾಧ್ಯವಾಗುತ್ತದೆ. ನಿರಾಕಾರನಾದ ಪರಮಾತ್ಮನನ್ನು ಧ್ಯಾನಿಸುವುದು ಸಾಮಾನ್ಯ ಜನರಿಗೆ ಶಕ್ಯವಾದದ್ದಲ್ಲ. ಮನಸ್ಸು ನಿರಾಕಾರದಲ್ಲಿ ನಿಲ್ಲದು. ಅದಕ್ಕೆ ಭಕ್ತರಿಗೆ ಇಷ್ಟವಾದ ರೂಪವನ್ನು ಕಲ್ಪಿಸಿಕೊಡಬೇಕಾಗುತ್ತದೆ. ವೇದವೇ ಸಾಕಾರವಾದ ಪರಮಾತ್ಮನ ಕೆಲವು ರೂಪಗಳನ್ನು ತಿಳಿಸಿಕೊಟ್ಟಿದೆ. ಇದನ್ನೇ ಇತಿಹಾಸ ಪುರಾಣಾದಿಗಳು ವಿಸ್ತರಿಸಿ ಹೇಳಿವೆ. ಗಣಪತಿ, ಷಣ್ಮುಖ ಇತ್ಯಾದಿ ರೂಪಗಳನ್ನು ತಂತ್ರಶಾಸ್ತ್ರಗಳು ವಿಸ್ತರಿಸಿ ಹೇಳಿವೆ. ಭಗವಂತನು

ವಾಸ್ತವವಾಗಿ ಪುರುಷನೂ ಅಲ್ಲ, ಸ್ತ್ರೀಯೂ ಅಲ್ಲ, ನಪುಂಸಕನೂ ಅಲ್ಲ. ಆದ್ದರಿಂದ ಲಕ್ಷ್ಮೀ, ಸರಸ್ವತೀ, ದುರ್ಗಾ ಇತ್ಯಾದಿ ಸ್ತ್ರೀ ದೇವತೆಗಳನ್ನು ಪುರಾಣಗಳು ವಿಸ್ತರಿಸಿ ಹೇಳಿವೆ. ಈ ಸ್ತ್ರೀ ದೇವತೆಗಳು ಭಗವಂತನ ಶಕ್ತಿ ವಿಶೇಷಗಳು. ಶಕ್ತಿಶಬ್ದವು ಸಂಸ್ಕೃತದಲ್ಲಿ ಸ್ತ್ರೀಲಿಂಗವಾಗಿರುವುದರಿಂದ ಈ ದೇವತೆಗಳನ್ನು ಸ್ತ್ರೀ ಎಂದು ಗುರುತಿಸಲಾಗುತ್ತದೆ. ಶಕ್ತಿಗೂ ಶಕ್ತಿವಂತನಾದ ಭಗವಂತನಿಗೂ ಭೇದವಿಲ್ಲ. ಶಕ್ತಿಯನ್ನು ಭಗವಂತನಿಂದ ಬೇರ್ಪಡಿಸಲು ಶಕ್ಯವಿಲ್ಲ. ಬೆಂಕಿಯಿಂದ ಸುಡುವ ಶಕ್ತಿಯನ್ನೂ ದೀಪದಿಂದ ಪ್ರಕಾಶಿಸುವ ಶಕ್ತಿಯನ್ನೂ ಹೇಗೆ ಬೇರ್ಪಡಿಸಲಾಗುವುದಿಲ್ಲವೋ ಹಾಗೆಯೇ ಶಕ್ತಿ ದೇವತೆಗಳು ಪರಮಾತ್ಮನಿಗಿಂತ ಬೇರೆಯಾಗಿಲ್ಲ. ಭಕ್ತರು ತಮ್ಮ ಇಚ್ಛೆಗೆ ಅನುಗುಣವಾಗಿ ಬೇರೆ ಬೇರೆ ದೇವತಾಶಕ್ತಿಗಳನ್ನೂ, ದೇವತಾಸ್ವರೂಪಗಳನ್ನೂ ಕಲ್ಪಿಸಿಕೊಂಡು ಶಾಸ್ತ್ರೋಕ್ತವಾದ ವಿಗ್ರಹಗಳನ್ನು ಆಯಾ ದೇವತೆಗಳೆಂದೇ ಪೂಜಿಸುತ್ತಾರೆ. ಹೀಗಿರುವಾಗ, ವಿಗ್ರಹಪೂಜೆ ಸರಿಯಲ್ಲ, ಹಿಂದೂಗಳಿಗೆ ಎಷ್ಟು ದೇವತೆಗಳಿದ್ದಾರೆ ಎಂದು ನಿಂದಿಸುವುದು ಅವಿವೇಕದ ಪರಮಾವಧಿ ಎನ್ನಬಹುದು.

ಪರಮಾತ್ಮನು ನಿರಾಕಾರನಾದರೂ ಭಕ್ತರ ಇಷ್ಟಸಿದ್ಧಿಗಾಗಿ ನಾನಾ ರೂಪಗಳನ್ನು ಧರಿಸುತ್ತಾನೆ. ಧರಿಸಬಲ್ಲನು ಎಂದು ನಿಶ್ಚಿತವಾದ ಮೇಲೆ ಈ ವಿಷಯದಲ್ಲಿ ಶಂಕೆಗೆ ಆಸ್ಪದವೇ ಇಲ್ಲ. ಆದ್ದರಿಂದಲೇ ಈ ಭಾರತ ದೇಶದಲ್ಲಿ ನಾನಾ ದೇವಸ್ಥಾನಗಳ ನಿರ್ಮಾಣವಾಗಿದೆ. ರಾಮೇಶ್ವರದಿಂದ ಕಾಶಿಯವರೆಗೆ ಇರುವ ದೇವಸ್ಥಾನಗಳ ಭವ್ಯವಾದ ಶಿಲ್ಪಗಳು ಭಕ್ತರ ಮನಸ್ಸನ್ನು ಆಕರ್ಷಿಸುತ್ತವೆ. ಈ ದೇವಸ್ಥಾನಗಳನ್ನು ನಿರ್ಮಿಸುವುದು ರಾಜಮಹಾರಾಜರುಗಳಿಂದ ಮಾತ್ರ ಸಾಧ್ಯವಾದದ್ದು. ಅವರಿಗೂ ಅವರ ಮಂತ್ರಿಗಳಿಗೂ ಅದೆಲ್ಲವನ್ನೂ ಅಂಗೀಕರಿಸಿದ ಜನಸಾಮಾನ್ಯರಿಗೂ, ಶಿಲ್ಪ ನಿರ್ಮಾಣದಲ್ಲಿ ಪಳಗಿದ ಶಿಲ್ಪಿಗಳಿಗೂ ಈ ವಿಷಯಗಳೆಲ್ಲವೂ ತಿಳಿದಿರಲೇಬೇಕು. ಪರಮಾತ್ಮನಿಗೆ ನಾನಾ ರೂಪಗಳನ್ನು ಧರಿಸುವ ಶಕ್ತಿಯಿಲ್ಲ, ಅವನ್ನು ಧರಿಸಿಲ್ಲವೆಂದು ನಿಶ್ಚಿತವಾಗಿದ್ದರೆ ಇಂತಹ ದೇವಸ್ಥಾನಗಳ ನಿರ್ಮಾಣ ಹೇಗೆ ಆಗುತ್ತದೆ? ಅದ್ಭುತವಾದ ಈ ಜಗತ್ತನ್ನು ನಿರ್ಮಿಸಿದ ಸರ್ವಶಕ್ತನಾದವನಿಗೆ ತನಗೊಂದು ರೂಪವನ್ನು

ಕಲ್ಪಿಸಿಕೊಳ್ಳಲು ಶಕ್ಯವಿಲ್ಲವೆ? ರೂಪವನ್ನು ಧರಿಸಿ ಅವತರಿಸಲು ಶಕ್ಯವಿಲ್ಲವೆ? ಆದ್ದರಿಂದ ವಿಗ್ರಹಪೂಜೆಯು ಶಾಸ್ತ್ರವಿಹಿತವೇ ಹೌದು.

ಈ ಪ್ರಕಾರವಾಗಿ ನಮ್ಮಲ್ಲಿ ಪ್ರಚುರವಾಗಿರುವ ದರ್ಶನಗಳ ಸ್ವರೂಪವನ್ನೂ, ನಾಸ್ತಿಕವಾದದ ಸ್ವರೂಪವನ್ನೂ ಸ್ಥೂಲವಾಗಿ ಪರಿಚಯಿಸಿದ್ದು ಆಯಿತು. ಕೇವಲ ನಾಸ್ತಿಕವಾದಕ್ಕೆ ಉತ್ತರವನ್ನಿತ್ತು ಆಸ್ತಿಕವಾದವನ್ನು ಸಮರ್ಥಿಸುವುದು ಮಾತ್ರ ಇಲ್ಲಿ ಉದ್ದಿಷ್ಟವಾಗಿದೆ. ಆದ್ದರಿಂದ ಆಸ್ತಿಕದರ್ಶನಗಳೆಲ್ಲವೂ ನಾಸ್ತಿಕವಾದಕ್ಕೆ ಪ್ರತಿಪಕ್ಷವಾಗಿರುತ್ತವೆ. ಸಾಂಖ್ಯಾದಿವಾದಗಳೂ ಸಹ ವೇದಾಂತದಲ್ಲಿ ಮುಕ್ತಾಯವಾಗುತ್ತವೆ. ಆದ್ದರಿಂದ ವೇದವನ್ನು ಅಂಗೀಕರಿಸಿದ ವೈದಿಕರು ವೇದಾಂತಿಗಳಾಗಿದ್ದಾರೆ. ವೇದಾಂತದಲ್ಲಿಯೂ ಅದ್ವೈತ, ದ್ವೈತ, ವಿಶಿಷ್ಟಾದ್ವೈತ ಎಂಬ ಮೂರು ಪ್ರಮುಖ ಭೇದಗಳುಂಟು. ನಾಸ್ತಿಕರಿಗೆ ಉತ್ತರಿಸುವಾಗ ಇವರೆಲ್ಲರೂ ಏಕಾಭಿಪ್ರಾಯದಿಂದ ಸಮಾಧಾನ ಹೇಳುತ್ತಾರೆ. ತಮ್ಮಲ್ಲಿರುವ ಒಳಭೇದಗಳನ್ನು ಅವರವರೇ ಪರಿಹರಿಸಿಕೊಳ್ಳುತ್ತಾರೆ. ಅದನ್ನು ನಾಸ್ತಿಕನು ಪ್ರಶ್ನಿಸಬೇಕಾದ್ದಿಲ್ಲ. ಈ ಮಾತನ್ನು ಏಕೆ ಹೇಳಬೇಕಾಯಿತೆಂದರೆ ದೇವರನ್ನು ನಿರಾಕರಿಸುವ ಜನರು ಅದ್ವೈತವಾದದಂತೆ ಬ್ರಹ್ಮವು ನಿರ್ಗುಣ, ನಿರಂಜನ ಎಂಬುದನ್ನು ದೂಷಿಸುತ್ತಾರೆ. ಅದಕ್ಕೆ ಉತ್ತರವನ್ನು ಕೊಟ್ಟೊಡನೆ ಸಗುಣಬ್ರಹ್ಮದ ವಿಷಯವಾಗಿ ಕೇಳುತ್ತಾರೆ. ಗಣಪತಿ ಮುಂತಾದ ಮೂರ್ತಿಗಳನ್ನು ಧಿಕ್ಕರಿಸುತ್ತಾರೆ. ಹಾಗೆಯೇ, ದೇವರು ಪಕ್ಷಪಾತಿ ಎನ್ನುತ್ತಾರೆ. ಅದಕ್ಕೆ ಉತ್ತರವನ್ನು ಹೇಳುತ್ತಿರುವಾಗಲೇ ಅವನು ಕರುಣಾಳುವಲ್ಲ ಎನ್ನುತ್ತಾರೆ. ಜಗತ್ತಿನ ಮೂಲಕಾರಣ ಯಾವುದೆಂದರೆ ಪ್ರಕೃತಿ ಎಂದು ಉತ್ತರ ಬರುತ್ತದೆ. ಅದರ ಸ್ವರೂಪವನ್ನು ಕೇಳಿದೊಡನೆ ಜಗತ್ತು ಅನಾದಿ ಎನ್ನುತ್ತಾರೆ. ಹೀಗೆ ವಾದಿಸತಕ್ಕವರಿಗೆ ಆಸ್ತಿಕರೆಲ್ಲರೂ ಸೇರಿ ಉತ್ತರವನ್ನೀಯಬೇಕಾಗಿದೆ. ಆದ್ದರಿಂದ ಅವರು ಹೇಳುವ ಅತಿವಾದಕ್ಕೆ ಆಸ್ತಿಕದರ್ಶನದವರು ಒಟ್ಟಾಗಿ ಉತ್ತರವನ್ನಿತ್ತು ದೇವರ ಅಸ್ತಿತ್ವವನ್ನು ಸಾಧಿಸಲು ಇಲ್ಲಿ ಪ್ರಯತ್ನ ಮಾಡಲಾಗಿದೆ. ನಮ್ಮ ಉದ್ದೇಶವು ಮುಖ್ಯವಾಗಿ ಈಗಿನ ದೇಶಕಾಲ ಪರಿಸ್ಥಿತಿಯನ್ನು ಕಂಡು ಇದಕ್ಕೆ ಒಂದು

ಸಮಾಧಾನವನ್ನು ಹುಡುಕುವುದೇ ಆಗಿದೆ. ಭಗವದ್ಗೀತೆಯಲ್ಲಿ ಹೇಳಿದ ಶ್ರೀಕೃಷ್ಣನ ಉಪದೇಶವನ್ನು ಸಾರ್ವತ್ರಿಕವಾಗಿ ಅನ್ವಯಿಸಿ ಸಮಾಜದಲ್ಲಿ ಶಾಂತಿ ಸಮಾಧಾನಗಳನ್ನು, ಎಲ್ಲ ವರ್ಗದವರ ಸುಖಬಾಳ್ವೆಯನ್ನು ಬಯಸುವುದೇ ಆಗಿದೆ. ಯಾವುದೋ ಕಾರಣದಿಂದ - ಬಹುಶಃ ದೇವರ ಅಸ್ತಿತ್ವವನ್ನು ನಿರಾಕರಿಸುವ ಪುಸ್ತಕಗಳೇ ಈಗ ಅತಿಯಾಗಿ ಬೆಳೆದಿದ್ದು ಸಮಾಜದಲ್ಲಿ ದ್ವೇಷಾಸೂಯೆಗಳನ್ನು ವರ್ಧಿಸುತ್ತಿವೆ. ಆಸುರೀಸಂಪತ್ತನ್ನು ನೀಗಿಸಿ ಜನರಲ್ಲಿ ದೈವೀಸಂಪತ್ತನ್ನು ಮೂಡಿಸಬೇಕೆಂಬುದೇ ನಮ್ಮ ಪ್ರಬಲವಾದ ಆಕಾಂಕ್ಷೆ. ಆ ದಿಶೆಯಲ್ಲಿ ಈ ಪುಸ್ತಕವು ಸ್ವಲ್ಪ ಮಟ್ಟಿಗಾದರೂ ಉಪಕರಿಸೀತೆಂಬುದು ನಮ್ಮ ಭಾವನೆಯಾಗಿರುತ್ತದೆ. ಸಮಾಜದಲ್ಲಿ ಬೆಳೆದಿರುವ ದುರಾಶೆ, ವಂಚನೆ, ಅಸೂಯೆ, ಕಾಮಕ್ರೋಧಾಧಿಗಳಿಗೆ ಈ ನಾಸ್ತಿಕ್ಯವಾದವೇ ಮೂಲಕಾರಣವಾಗಿರುತ್ತದೆ. ಈ ವಾದವು ತೊಲಗಿ ದೇವರ ಅಸ್ತಿತ್ವ, ಪಾಪ - ಪುಣ್ಯಗಳ ಅಸ್ತಿತ್ವ, ಅಧರ್ಮದಲ್ಲಿ ಭಯ, ಧರ್ಮದಲ್ಲಿ ಆಸಕ್ತಿ- ಇವು ಬೆಳೆದರೆ ಸಮಾಜವು ಉತ್ತಮ ಸ್ಥಿತಿಯನ್ನು ಪಡೆಯುತ್ತದೆ. ಆಗ ಜನರಿಗೆ ಭಗವದ್ಗೀತೆಯ ಉಪದೇಶವು ನಾಟುತ್ತದೆ.

ಭಗವದ್ಗೀತೆಯು ಎಲ್ಲ ವೇದೋಪನಿಷತ್ತುಗಳ ಸಾರಸಂಗ್ರಹವಾಗಿರುತ್ತದೆ.

**''ಸರ್ವೋಪನಿಷದೋ ಗಾವೋ**
**ದೋಗ್ಧಾ ಗೋಪಾಲನಂದನಃ ।**
**ಪಾರ್ಥೋ ವತ್ಸಃ ಸುಧೀರ್ಭೋಕ್ತಾ**
**ದುಗ್ಧಂ ಗೀತಾಮೃತಂ ಮಹತ್ ॥''**

''ಸಮಸ್ತ ಉಪನಿಷತ್ತುಗಳೇ ಹಸುಗಳು. ಗೋಪಾಲಕುಮಾರನಾದ ಶ್ರೀಕೃಷ್ಣನು ಇವುಗಳ ಹಾಲನ್ನು ಕರೆಯತಕ್ಕವನು. ಅರ್ಜುನನು ಹಸುವಿನ ಕರುವಿದ್ದಂತೆ. ಬುದ್ಧಿಶಾಲಿಯಾದ ಸಜ್ಜನನು ಈ ಹಾಲನ್ನು ಕುಡಿಯತಕ್ಕವನು. ಗೀತೆಯ ಅಮೃತೋಪದೇಶವೇ ಈ ಹಸುಗಳ ಶ್ರೇಷ್ಠವಾದ ಕ್ಷೀರ.''

ಸುಂದರವಾದ ಈ ಶ್ಲೋಕವು ಗಮನಾರ್ಹವಾದುದು. ಸಮಸ್ತ ಉಪನಿಷತ್ತುಗಳ ಸಾರಸಂಗ್ರಹ ಇದರಲ್ಲಿ ಬಂದಿದೆ. ಅರ್ಜುನನ ನಿಮಿತ್ತದಿಂದ ಸಮಸ್ತರ ಕಲ್ಯಾಣಕ್ಕಾಗಿ ಶ್ರೀಕೃಷ್ಣನು ಗೀತೋಪದೇಶವನ್ನು ಮಾಡಿದ್ದಾನೆ. ಉಪನಿಷತ್ತುಗಳು ಬಹಳ ಇವೆ. ಅವುಗಳ ಅರ್ಥವನ್ನು ತಿಳಿಯುವುದು ಕಠಿಣ. ನಮ್ಮ ಜೀವನಕ್ಕೆ ಅದನ್ನು ಹೊಂದಿಸಿಕೊಳ್ಳುವುದು ಸಹ ಕ್ಲೇಶದಾಯಕವೇ ಆಗಿದೆ. ಆದ್ದರಿಂದ ಲೋಕಕಲ್ಯಾಣಕ್ಕಾಗಿ ಶ್ರೀಕೃಷ್ಣನು ಮಾಡಿದ ಉಪದೇಶವನ್ನು ವ್ಯಾಸ ಮುನಿಗಳು ಏಳುನೂರು ಶ್ಲೋಕಗಳಲ್ಲಿ ಸಂಗ್ರಹಿಸಿದ್ದಾರೆ. ಭಾರತೀಯರು ಹೆಮ್ಮೆಪಟ್ಟುಕೊಳ್ಳಬೇಕಾದ ಅತ್ಯುತ್ತಮ ಗ್ರಂಥವಿದು.



-೩-

ಇನ್ನು ಮುಂದೆ ಪ್ರಶ್ನೋತ್ತರರೂಪದಿಂದ ನಾಸ್ತಿಕವಾದವನ್ನು ಖಂಡಿಸಲಾಗುವುದು. ಇದರಿಂದ ಕೆಲವರು ಮಾಡುವ ಶಂಕೆಗಳಿಗೆ ಉತ್ತರವನ್ನು ಹೇಳಿದಂತಾಗುವುದಲ್ಲದೇ ಆಸ್ತಿಕವಾದವನ್ನು ದೃಢಪಡಿಸಿದಂತಾಗುತ್ತದೆ. ಕೆಲವನ್ನು ಹಿಂದೆ ಪ್ರಸ್ತಾಪಿಸಿರುವುದರಿಂದ ಅಲ್ಲಲ್ಲಿ ಪುನರುಕ್ತಿಗಳು ಕಾಣಿಸಬಹುದು. ಅದೆಲ್ಲವೂ ಪೂರ್ವೋಕ್ತದ ವಿಸ್ತಾರವೆಂದು ತಿಳಿಯಬೇಕು. ಪ್ರಶ್ನಿಸತಕ್ಕವನು ನಾಸ್ತಿಕ, ಉತ್ತರ ಹೇಳುವವನು ಆಸ್ತಿಕ ಎಂದು ಭಾವಿಸಬೇಕು.

**ಪ್ರಶ್ನೆ** :- ಆದಿಮಾನವನು ಅಗ್ನಿಪರ್ವತಗಳನ್ನೂ, ಗುಡುಗು, ಮಿಂಚು, ಸಿಡಿಲು, ಮುಂತಾದ ಪ್ರಕೃತಿಯ ಅಬ್ಬರಗಳನ್ನೂ ಕೇಳಿ ಆಶ್ಚರ್ಯದಿಂದ ಮತ್ತು ಭಯದಿಂದ ಇದೆಲ್ಲವನ್ನೂ ನಿರ್ಮಿಸಿದ ದೇವರು ಇದ್ದಾನೆಂದು ಕಲ್ಪಿಸಿಕೊಂಡಿರಬೇಕಲ್ಲವೆ?

**ಉತ್ತರ** : ನೀವು ಹೇಳುವ ಆದಿಮಾನವರು ದಿಢೀರನೆ ಈ ಲೋಕಕ್ಕೆ ಬಂದು ಇಳಿದರೇನು? ಡಾರ್ವಿನ್ನನ ವಿಕಾಸವಾದದಂತೆ ಅಮೀಬಾ ಸ್ಥಿತಿಯಲ್ಲಿದ್ದವನು ಕ್ರಮವಾಗಿ ವಿಕಾಸಗೊಂಡು ಕತ್ತೆ ಕುದುರೆ, ಕಪಿಗಳ ಆಕಾರಗಳನ್ನು ತಳೆದು ಕಡೆಯಲ್ಲಿ ಮನುಷ್ಯನಾದನಲ್ಲವೆ? ಅವನಿಗೆ ಈ ಲೋಕ ಹೊಸದಲ್ಲ. ಪ್ರಕೃತಿಯ ವೈಚಿತ್ರ್ಯಗಳನ್ನು ನೋಡುತ್ತಲೇ ಬಂದಿದ್ದಾನೆ.

**ಪ್ರಶ್ನೆ**:- ಕಲ್ಲು, ನೀರು, ಗಿಡ, ಮರ, ಮೃಗ, ಪಕ್ಷಿಗಳನ್ನು ದೇವರೆಂದು ಮಾನವನು ಮೊದಲು ಕಲ್ಪಿಸಿಕೊಂಡಿರಬೇಕು.

**ಉತ್ತರ** :- ನಿಮ್ಮ ಕಲ್ಪನೆ ಪರಸ್ಪರ ವಿರುದ್ಧವಾದದ್ದು. ಭೀಕರವಾದ ಅಗ್ನಿಪರ್ವತ, ಗುಡುಗು, ಸಿಡಿಲು ಮುಂತಾದವನ್ನು ನೋಡಿ ಅವನ್ನು ನಿರ್ಮಿಸಿದವನು ಗಿಡ, ಮರ,

ಕಲ್ಲು ಇತ್ಯಾದಿ ರೂಪಗಳಲ್ಲಿ ಇದ್ದಾನೆಂದು ಯಾವ ದಡ್ಡನೂ ತಿಳಿಯುವುದಿಲ್ಲ. ಆಕಾಶದಲ್ಲಿ ಎಲ್ಲಿಯೋ ಮಹಾಶಕ್ತಿಶಾಲಿಯಾದ ಒಬ್ಬನು ಕಣ್ಣಿಗೆ ಕಾಣದಂತೆ ಇದ್ದಾನೆಂದು ಒಂದು ವೇಳೆ ಕಲ್ಪಿಸಿಕೊಳ್ಳಬಹುದು. ಈಗಲೂ ಕಾಡುಜನರು ಆಕಾಶದ ಕಡೆಗೆ ಕೈತೋರಿಸುತ್ತಾರೆಂಬುದು ಪ್ರಸಿದ್ಧವಾಗಿದೆ.

**ಪ್ರಶ್ನೆ** : - ಇಂದ್ರ, ಅಗ್ನಿ, ವಾಯು ಇತ್ಯಾದಿಗಳು ನಾಮರೂಪಗಳನ್ನು ಪಡೆದ ಪ್ರಕೃತಿ ಶಕ್ತಿಗಳು. ಆ ಶಕ್ತಿಗಳಿಗೆ ದೈವತ್ವವನ್ನು ಆರೋಪಮಾಡುವುದು ಅಜ್ಞಾನದಿಂದಲೇ ಅಲ್ಲವೆ?

**ಉತ್ತರ** : ಈ ಪ್ರಕೃತಿ ಶಕ್ತಿಗಳು ಎಲ್ಲಿಂದ ಬಂದವು? ಇವು ಇತರ ವಸ್ತುಗಳಂತೆ ನಿರ್ಮಿತವಾದವು. ಯಾರಿಂದ ಇವು ನಿರ್ಮಿತವಾದವು ಎಂಬುದು ವಿಚಾರಣೀಯವಾದದ್ದು. ಕೇನೋಪನಿಷತ್ತಿನ ಕೊನೆಯಲ್ಲಿ ಬರುವ ಕಥೆಯಲ್ಲಿ ಅಗ್ನಿಗೆ ಸುಡುವ ಶಕ್ತಿ ಎಲ್ಲಿಂದ ಬಂದಿತು ಎಂಬ ಪ್ರಶ್ನೆ ಬರುತ್ತದೆ. ಹಾಗೆಯೇ, ವಾಯುವಿಗೆ ವಸ್ತುವನ್ನು ಹಾರಿಸುವ ಶಕ್ತಿ ಎಲ್ಲಿಂದ ಬಂದಿತು ಎಂಬ ಪ್ರಶ್ನೆ ಬರುತ್ತದೆ. ಇದು ಕಾಡುಜನರ ಪ್ರಶ್ನೆಯಲ್ಲ. ವಿಚಾರಶೀಲನಾದ ಪ್ರಜ್ಞಾವಂತನ ಪ್ರಶ್ನೆ. ಸರ್ವಶಕ್ತನಾದ ಪರಮಾತ್ಮನಿಂದ ಈ ಶಕ್ತಿಗಳು ಬಂದಿವೆ ಎಂಬುದೇ ಉಪನಿಷತ್ತಿನ ಉತ್ತರ.

**ಪ್ರಶ್ನೆ** :- ಸೂರ್ಯನು ಗ್ರಹವಲ್ಲದಿದ್ದರೂ ಗ್ರಹವೆಂದು ಕಲ್ಪಿಸಿಕೊಂಡು ಜೋಯಿಸರು ಫಲ ಹೇಳುತ್ತಾರೆ. ಅವನು ಫಲವನ್ನು ಕೊಡುವುದರಿಂದ ಸೂರ್ಯನಾರಾಯಣನಾಗುತ್ತಾನಲ್ಲವೆ?

**ಉತ್ತರ** :- ಇದು ಅತಿರೇಕದ ಪ್ರಶ್ನೆ. ಸೂರ್ಯ, ಚಂದ್ರ, ಮಂಗಳ, ಬುಧ ಮೊದಲಾದವರು ಗ್ರಹಗಳೆಂದು ಜ್ಯೋತಿಃಶಾಸ್ತ್ರಜ್ಞರು ವ್ಯವಹರಿಸುತ್ತಾರೆ. ಇದು ಪಾರಿಭಾಷಿಕವಾದ ಸಂಜ್ಞೆ. ಗ್ರಹವೆಂದರೆ Planet (ಪ್ಲಾನೆಟ್) ಎಂದು ಇಂಗ್ಲೀಷ್ ವಾಸನೆಯಿಂದ ನೀವು ಆಕ್ಷೇಪಿಸುತ್ತಿದ್ದೀರಿ. ಜ್ಯೋತಿಃಶಾಸ್ತ್ರದ ಪ್ರಕಾರ ಫಲವನ್ನು ನೀಡುವ ಜ್ಯೋತಿಗಳು ಗ್ರಹಗಳೆನಿಸುತ್ತವೆ. ಅಶ್ವಿನೀ ಮೊದಲಾದ ಇಪ್ಪತ್ತೇಳು ನಕ್ಷತ್ರಗಳು. ಉಳಿದವು ತಾರೆಗಳು. ಇವು ಭಾರತೀಯರು ಕಲ್ಪಿಸಿಕೊಂಡ ಸಂಕೇತಗಳು.

**''ನಕ್ಷತ್ರತಾರಾಗ್ರಹಸಂಕುಲಾಪಿ ಜ್ಯೋತಿಷ್ಮತೀ ಚಂದ್ರಮಸ್ಯೈವ ರಾತ್ರಿಃ''** ಎಂದು ಕಾಳಿದಾಸನು ರಘುವಂಶದಲ್ಲಿ ವರ್ಣಿಸಿದ್ದಾನೆ. ಗ್ರಹ ಎಂಬ ಶಬ್ದಕ್ಕೆ ಪ್ಲಾನೆಟ್ ಎಂದು ಅರ್ಥ ಮಾಡಿಕೊಂಡು ದೂರುವುದು ಅಯುಕ್ತ. ಇನ್ನು ಸೂರ್ಯನನ್ನು ನಾರಾಯಣ ಎಂದು ಆಸ್ತಿಕರು ತಿಳಿದಿರುವುದು ಮೌಢ್ಯದಿಂದಲ್ಲ, ಪರಮೋತ್ತಮವಾದ ಅಧ್ಯಾತ್ಮ ಜ್ಞಾನದಿಂದ ಸೂರ್ಯನು ಶ್ರೇಷ್ಠವಾದ ಈಶ್ವರಪ್ರತೀಕವೆಂದು ತಿಳಿದಿದ್ದಾರೆ. ನಿಮಗೆ ಗಾಯತ್ರೀ ಮಂತ್ರದ ಅರ್ಥ ಗೊತ್ತಿದೆಯೆ?

**ಪ್ರಶ್ನೆ** : - ತುಳಸೀಗಿಡ, ಅರಳೀಮರ, ಸರ್ಪ - ಇಂಥವುಗಳನ್ನು ದೇವರೆಂದು ಪೂಜಿಸುವುದು ಅಜ್ಞಾನವಲ್ಲವೇ?

**ಉತ್ತರ** :- ಅಲ್ಲ. **''ಸರ್ವಂ ಖಲ್ವಿದಂ ಬ್ರಹ್ಮ''** , **''ಇದಂ ಸರ್ವಂ ಯದಯಮಾತ್ಮಾ''** ಇತ್ಯಾದಿ ವೇದವಾಕ್ಯಗಳು ಈ ಜಗತ್ತೆಲ್ಲವೂ ಪರಮಾತ್ಮನ ಸ್ವರೂಪವೆಂದು ವರ್ಣಿಸಿದೆ.

**''ನಿರಾಕಾರಂ ನರಾಕಾರಂ ಜಗದಾಕಾರಮವ್ಯಯಮ್''** ಇತ್ಯಾದಿ ಪುರಾಣ ವಾಕ್ಯಗಳು ಸರ್ವವೂ ಭಗವಂತನ ಸ್ವರೂಪವೆಂದು ಘೋಷಿಸುತ್ತವೆ. ಇದು ಅಧ್ಯಾತ್ಮ ಜ್ಞಾನದ ಪರಮಾವಧಿ. ಕ್ರಮವಾಗಿ ಈ ಜ್ಞಾನವು ಮನುಷ್ಯನಿಗೆ ಪ್ರಾಪ್ತವಾಗಬೇಕೆಂದು ತುಳಸೀಗಿಡ ಮೊದಲಾದವುಗಳಲ್ಲಿ ಪೂಜ್ಯಭಾವನೆ ಉಂಟಾಗಲೆಂಬ ಸದುದ್ದೇಶದಿಂದ ಋಷಿಗಳು ಅವನ್ನು ಪೂಜಿಸಬೇಕೆಂದು ಹೇಳಿದ್ದಾರೆ. ಪರಮಾತ್ಮನು ಸರ್ವಾತ್ಮನೆಂಬ ಭಾವನೆ ಬೆಳೆಯಲು ಇವೆಲ್ಲವೂ ಸಹಕಾರಿ. ಶಾಸ್ತ್ರಜ್ಞಾನವಿಲ್ಲದೇ ಈ ರೀತಿ ಉಪವಾಸ ಮಾಡುವುದು ಅವಿವೇಕವೇ ಸರಿ.

**ಪ್ರಶ್ನೆ** :- ಎಲ್ಲ ಕಾರ್ಯಗಳಿಗೂ ಈ ಜನರು ಗಣಪತಿಯನ್ನು ಪೂಜಿಸುತ್ತಾರೆ. ಅವನು ಮಹಾಕಾಯ. ಡೊಳ್ಳುಹೊಟ್ಟೆ. ಹೊಟ್ಟೆಗೆ ಒಂದು ಹಾವನ್ನು ಬಿಗಿದುಕೊಂಡಿದ್ದಾನೆ. ಆನೆಯ ಮುಖ. ಆ ಧಡಿಯನ ವಾಹನ ಒಂದು ಇಲಿ! ಇದೆಲ್ಲವೂ ಹಾಸ್ಯಾಸ್ಪದವಲ್ಲವೆ?

**ಉತ್ತರ** :- ವಿವೇಕಕ್ಕೆ ಒಂದು ಅವಧಿಯುಂಟು. ಅವಿವೇಕಕ್ಕೆ ಅವಧಿಯೇ ಇಲ್ಲ!

ವಿಜ್ಞಾನ ಶಾಸ್ತ್ರವನ್ನು ಅರಿಯದ ಒಬ್ಬ ಹಳ್ಳಿಗನು ವಿಜ್ಞಾನವನ್ನು ಆಕ್ಷೇಪಿಸುವಂತೆ ನೀವು ಆಕ್ಷೇಪಿಸುತ್ತಿದ್ದೀರಿ. ಮೊದಲು, ಭಾರತೀಯರ ವೇದ ವೇದಾಂತಗಳನ್ನು ಗುರುಮುಖದಿಂದ ಸರಿಯಾಗಿ ಕಲಿತುಕೊಂಡಿದ್ದರೆ ಇಂತಹ ಪ್ರಶ್ನೆ ನಿಮ್ಮ ಬಾಯಿಯಿಂದ ಬರುತ್ತಿರಲಿಲ್ಲ. ಭಾರತೀಯರು ಪರಬ್ರಹ್ಮವನ್ನು ನಿರಾಕಾರವೆಂದು ನಿಶ್ಚಯದಿಂದ ತಿಳಿದಿದ್ದಾರೆ. ಉಪಾಸನಾರ್ಥವಾಗಿ ಭಕ್ತರು ನಾನಾ ರೂಪವಾಗಿ ಕಲ್ಪಿಸಿಕೊಳ್ಳುತ್ತಾರೆ. **''ಉಪಾಸನಾರ್ಥಂ ಭಕ್ತಾನಾಂ ಬ್ರಹ್ಮಣೋ ರೂಪಕಲ್ಪನಾ''** ಎಂಬ ನುಡಿ ಪ್ರಸಿದ್ಧವಾದದ್ದು. ಈ ರೂಪ ಕಲ್ಪನೆಯೂ ಕೂಡ ಒಂದಾನೊಂದು ತತ್ತ್ವವನ್ನು ಅವಲಂಬಿಸಿ ಪ್ರವೃತ್ತವಾಗಿರುತ್ತದೆ. ಸಂಕ್ಷೇಪವಾಗಿ ಹೇಳಬೇಕೆಂದರೆ ಗಣಪತಿಯು ಶಬ್ದರೂಪಗಳಲ್ಲಿರುವ ವೇದಗಳ ಅಧಿದೇವತೆ. ಗಣೇಶಾಥರ್ವಶೀರ್ಷವೆಂಬ ಉಪನಿಷತ್ತಿನಲ್ಲಿ ಇದರ ಸ್ಪಷ್ಟ ಕಲ್ಪನೆಯಿದೆ. **''ತ್ವಂ ವಾಙ್ಮಯಃ, ತ್ವಂ ಚತ್ವಾರಿ ವಾಕ್ಪರಿಮಿತಾ ಪದಾನಿ''** ಇತ್ಯಾದಿ ವಾಕ್ಯಗಳು ಇದನ್ನು ಸ್ಪಷ್ಟಪಡಿಸುತ್ತವೆ. ವೇದಗಳೂ, ಶಬ್ದಗಳೂ ಅನಂತವೆಂಬುದನ್ನು ಗಣಪತಿಯ ಲಂಬೋದರವು ಸೂಚಿಸುತ್ತದೆ. ಮನುಷ್ಯನಲ್ಲಿರುವ ಷಟ್ಚಕ್ರಗಳಲ್ಲಿ ಮೂಲಾಧಾರವು ಮುಖ್ಯವಾದದ್ದು. ಇದರಲ್ಲಿ ಪರಾವಾಕ್ ನೆಲೆಸಿದೆ. ಮೇಲೆ ಹೇಳಿದ ಉಪನಿಷತ್ತಿನಲ್ಲಿಯೇ **''ತ್ವಂ ಮೂಲಾಧಾರೇ ಸ್ಥಿತೋಽಸಿ ನಿತ್ಯಮ್''** ಎಂಬ ವಚನವಿದೆ. ಗಣಪತಿಯು ಪರಾವಾಕ್ ಎಂಬುದಕ್ಕೆ ಇದೊಂದು ಮುಖ್ಯ ಆಧಾರ. ಈ ಚಕ್ರದಲ್ಲಿ ಕುಂಡಲಿನೀ ಶಕ್ತಿಯು ನೆಲೆಸಿದೆ ಎಂದು ತಂತ್ರಶಾಸ್ತ್ರವು ಹೇಳುತ್ತದೆ. ಕುಂಡಲಿನಿಯು ಸರ್ಪರೂಪವಾದದ್ದು. ಗಣಪತಿಯ ಹೊಟ್ಟೆಗೆ ಸರ್ಪವನ್ನು ಸುತ್ತಿರುವುದು ಈ ಕಾರಣದಿಂದ. ಇವನ ವಾಹನ ಮೂಷಕವೆನ್ನುವುದು ಒಂದು ಅಭಿಪ್ರಾಯದಿಂದ. ವಾಹನವೆಂದರೆ ವಾಹಕ. ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಮುಟ್ಟಿಸುವುದು ವಾಹನದ ಕೆಲಸ. ಪ್ರಕೃತದಲ್ಲಿ ಪ್ರತಿಪಾದಕವೆಂದರ್ಥ. ಗಣಪತಿಯು ಶಬ್ದದೇವತೆಯಾದ್ದರಿಂದ ಶಬ್ದಗಳನ್ನು ಪ್ರತಿಪಾದಿಸತಕ್ಕದ್ದು ಬಾಯಿ. ನಾಲಿಗೆಯಿಂದ ಶಬ್ದಗಳನ್ನು ಉಚ್ಚರಿಸುತ್ತೇವೆ. ನಾಲಗೆಯು ಶಬ್ದಗಳನ್ನು ಇನ್ನೊಬ್ಬರಿಗೆ ಮುಟ್ಟಿಸುತ್ತದೆ. ಬಾಯಿ ಬಿಲದಂತೆಯೂ,

ನಾಲಗೆಯು ಇಲಿಯಂತೆಯೂ ಇರುವುದರಿಂದ ಇಲಿಯು ಗಣಪತಿಯ ವಾಹನವಾಯಿತು. ಇದು ಮೂರ್ತಿಕಲ್ಪನೆಯ ಒಂದು ರಹಸ್ಯ. ಎಲ್ಲ ಪುಣ್ಯಕಾರ್ಯಗಳಲ್ಲಿಯೂ ಆದಿಯಲ್ಲಿ ವೇದರೂಪ ಶಬ್ದಗಳ ಅಧಿದೇವತೆಯನ್ನು ಪೂಜಿಸುವುದು ಯುಕ್ತವೇ ಹೌದು. ವೇದಮಂತ್ರಗಳ ಉಚ್ಚಾರಣೆ ಸ್ಪಷ್ಟವಾಗಿ ಆಗಬೇಕು. ಉದಾತ್ತಾದಿ ಸ್ವರಗಳಲ್ಲಿ ತಪ್ಪು ಬರಬಾರದು, ಎಂಬ ಆಶಯದಿಂದ ಮೊದಲು ಗಣಪತಿಯನ್ನು ಪೂಜಿಸುತ್ತಾರೆ. ಒಬ್ಬ ಋಷಿಗೆ ಆನೆಯ ರೂಪದಲ್ಲಿ ಗಣಪತಿಯು ಪ್ರತ್ಯಕ್ಷನಾದನೆಂದು **''ಮಹಾ ಹಸ್ತೀ ದಕ್ಷಿಣೇನ''** ಎಂಬ ಮಂತ್ರವು ತಿಳಿಸುತ್ತದೆ. ಆದ್ದರಿಂದ ಗಣಪತಿಯು ಗಜಮುಖನಾದನು.

ಇದೇ ಪ್ರಕಾರದಲ್ಲಿ ಪರಮೇಶ್ವರನಾದ ಶಿವನ ಕಲ್ಪನೆ. ಅವನು ದಿಗಂಬರ, ಚರ್ಮಾಂಬರನೂ ಹೌದು. ಸ್ಮಶಾನವಾಸಿ. ವೃಷಭ ಅವನ ವಾಹನ. ಕೈಯಲ್ಲಿ ತ್ರಿಶೂಲ. ಅರ್ಧನಾರೀಶ್ವರ. ಇಂತಹ ಶಿವನ ಸ್ವರೂಪವನ್ನು ಅದರ ಅಂತರಾರ್ಥವನ್ನರಿಯದೆ ಹಲವರು ಅವಿವೇಕಿಗಳು ನಿಂದಿಸುವುದುಂಟು. ಪರಮಾರ್ಥವೇನೆಂದರೆ ಇದೂ ಒಂದು ಅರ್ಥಪೂರ್ಣವಾದ ಕಲ್ಪನೆಯಾಗಿರುತ್ತದೆ. ವಿಭುವೂ ವಿಶ್ವೇಶ್ವರನೂ ಆದ ಶಿವನಿಗೆ ಹೊದಿಸಬಹುದಾದ ಬಟ್ಟೆಯೆಲ್ಲಿದೆ? ದಿಕ್ಕುಗಳೇ ಅವನಿಗೆ ಅಂಬರವಾದ್ದರಿಂದ ಶಿವನು ದಿಗಂಬರ. ಮಾನವನ ದೇಹದಲ್ಲಿ - ಹೃದಯಾಕಾಶದಲ್ಲಿ ನೆಲೆಸಿರುವುದರಿಂದ ಚರ್ಮವೇ ಅವನಿಗೆ ವಸ್ತ್ರ. ಆದ್ದರಿಂದ ಚರ್ಮಾಂಬರನೂ ಹೌದು. ಪ್ರಾಣವು ಹೋದಾಗ ಮನುಷ್ಯನು ಹೆಣವಾಗಿ ಬಿದ್ದಿರುತ್ತಾನಷ್ಟೆ. ರಕ್ತ, ಮಾಂಸ, ಮೂಳೆ, ಮಲ , ಮೂತ್ರಗಳಿಂದ ತುಂಬಿದ ಈ ದೇಹವೇ ಸ್ಮಶಾನ. ಈ ದೇಹದಲ್ಲಿ ನೆಲೆಸಿರುವುದರಿಂದ ಶಿವನು ಸ್ಮಶಾನವಾಸಿ. ಸ್ಥೂಲ, ಸೂಕ್ಷ್ಮ, ಕಾರಣವೆಂಬ ದೇಹತ್ರಯವನ್ನು ನಾಶಗೊಳಿಸಿ ಮೋಕ್ಷವನ್ನು ಅನುಗ್ರಹಿಸುವವನಾದ್ದರಿಂದ ಶಿವನು ತ್ರಿಶೂಲಧಾರಿ. ಶಿವನು ಸರ್ವಶಕ್ತಿಸಂಪನ್ನನಾಗಿರುತ್ತಾನೆ. ಶಕ್ತಿಯೇ ಪಾರ್ವತಿ ಅಥವಾ ಉಮಾ. ಈ ನಿತ್ಯಶಕ್ತಿಯುಕ್ತನಾದ್ದರಿಂದ ಶಿವನು ಅರ್ಧನಾರೀಶ್ವರ. ಶಕ್ತಿ ಶಬ್ದವು ಸ್ತ್ರೀಲಿಂಗವೆಂಬುದನ್ನು ಮರೆಯಬಾರದು. ನಾಲ್ಕು ವೇದಗಳೇ ನಾಲ್ಕು ಕಾಲಿರುವ

ವೃಷಭ. **"ಮಹಾನ್ ಶಬ್ದವೃಷಭಃ"** ಎಂದು ಮಹಾಭಾಷ್ಯದಲ್ಲಿ ಹೇಳಿದೆ. ಈಶ್ವರನು ವೇದಪ್ರತಿಪಾದ್ಯನೆಂದರ್ಥ. ವೃಷಭವಾಹನವೆಂದರೆ ಈಶ್ವರನು ವೇದಪ್ರತಿಪಾದ್ಯ ಎಂದರ್ಥ. ಶಿವಸ್ತುತಿಯ ಒಂದು ಪದ್ಯದಲ್ಲಿ -

**"ವ್ಯಾಸಪ್ರಷ್ಠಾಭುವನವಿದಿತಾ ಯಸ್ಯ ವಾಹಾದಿವಾಹಾಃ"** ಎಂದು ವರ್ಣಿಸಿದೆ. ವ್ಯಾಸರೇ ಮೊದಲಾದ ಮಹರ್ಷಿಗಳು ಈಶ್ವರನ ವಾಹನಗಳನ್ನು ಹೊರತಕ್ಕ ವಾಹನಗಳು ಎಂದು ವರ್ಣಿಸಲಾಗಿದೆ. ಈಶ್ವರನ ವಾಹನವಾದ ವೇದಗಳನ್ನು ಅಧ್ಯಯನ ಮಾಡಿ ಶಿರಸ್ಸಿನಲ್ಲಿಟ್ಟುಕೊಂಡವರು ಎಂದರ್ಥ. ಈ ಪ್ರಕಾರವಾಗಿ ಸನಾತನ ವೈದಿಕ ಧರ್ಮವು ಪರಮಾತ್ಮನಿಗೆ ನಾನಾ ರೂಪಗಳನ್ನು ಕಲ್ಪಿಸಿ ಉಪಾಸನೆಗೆ ಅನುಕೂಲವನ್ನು ಮಾಡಿಕೊಟ್ಟಿವೆ. ಈ ಕಲ್ಪಿತ ರೂಪಗಳನ್ನು ಅವಲಂಬಿಸಿ ಪುರಾಣಗಳು ನಾನಾ ಕಥೆಗಳನ್ನು ವಿನೋದಾರ್ಥವಾಗಿ ಹೆಣೆದಿವೆ. ಈ ತತ್ವವನ್ನರಿಯದೆ ಮನಸ್ಸಿಗೆ ತೋರಿದಂತೆ ನಮ್ಮ ದೇವರನ್ನು ಹಳಿಯುವುದು ಮೂರ್ಖತನವೇ ಸರಿ.

**ಪ್ರಶ್ನೆ** :- ಶ್ವೇತಾಶ್ವತರೋಪನಿಷತ್ತಿನಲ್ಲಿ ಈ ಮಂತ್ರ ಬರುತ್ತದೆ -

**"ಏಕೋ ದೇವಃ ಸರ್ವಭೂತೇಷು ಗೂಢಃ**
**ಸರ್ವವ್ಯಾಪೀ ಸರ್ವಭೂತಾಂತರಾತ್ಮಾ।**
**ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ**
**ಸಾಕ್ಷೀ ಚೇತಾಃ ಕೇವಲೋ ನಿರ್ಗುಣಶ್ಚ॥"**

ಇಲ್ಲಿರುವ ಕರ್ಮಾಧ್ಯಕ್ಷ, ಸಾಕ್ಷೀ ಎಂಬ ಶಬ್ದಗಳಿಗೆ ಅರ್ಥವೇನು?

**ಉತ್ತರ** :- ಕರ್ಮಾಧ್ಯಕ್ಷ ಎಂದರೆ ಸರ್ವ ಪ್ರಾಣಿಗಳು ಮಾಡುವ ಕರ್ಮಗಳಿಗೆ ಅಧಿಷ್ಠಾತೃ ಎಂದರ್ಥ. ಎಲ್ಲರೂ ಮಾಡುವ ಕರ್ಮಗಳನ್ನು ಗಮನಿಸುತ್ತಿರುವವನು. ಸಾಕ್ಷೀ ಎಂದರೆ ಸಕಲ ವಸ್ತುಗಳನ್ನೂ ನೋಡತಕ್ಕವನು ಎಂದರ್ಥ. **"ಸಾಕ್ಷಾತ್ ದ್ರಷ್ಟರಿ ಸಂಜ್ಞಾಯಾಮ್"** ಎಂಬ ಪಾಣಿನಿಸೂತ್ರದಿಂದ ಈ ಶಬ್ದವು ಸಿದ್ಧವಾಗುತ್ತದೆ.

**ಪ್ರಶ್ನೆ** :- ಹೀಗೆ ಸಕಲ ಕರ್ಮಗಳನ್ನು ನೋಡುತ್ತಾ ಗಮನಿಸುತ್ತಾ ಇರುವವನು ಜನರು ತಪ್ಪು ಮಾರ್ಗವನ್ನು ಹಿಡಿದಾಗ ಅವರಿಗೆ ಸದ್ಬುದ್ಧಿಯನ್ನೇಕೆ ಕೊಡುವುದಿಲ್ಲ?

ಅವರು ಆಕಸ್ಮಿಕ ವಿಪತ್ತುಗಳಿಗೆ ಸಿಕ್ಕಿ ಪ್ರಾಣಸಂಕಟಕ್ಕೆ ಒಳಗಾದಾಗ ಕರುಣಾಳುವಾದ ನಿಮ್ಮ ದೇವರು ಏಕೆ ರಕ್ಷಿಸುವುದಿಲ್ಲ?

**ಉತ್ತರ** :- ನೀವು ಉಪನಿಷತ್ತುಗಳನ್ನೇ ಆಕ್ರಮಿಸಿ ದೋಷವನ್ನು ಹುಡುಕುತ್ತಿದ್ದೀರಿ. ಉಪನಿಷತ್ತಿನ ವಿಷಯದಲ್ಲಿ ಸ್ವಲ್ಪ ಗೌರವಭಾವನೆ ಇರಬೇಕು. ಈ ಮಂತ್ರದಲ್ಲಿ ಹೇಳಿರುವುದು ಪರಬ್ರಹ್ಮಸ್ವರೂಪವನ್ನು. ಗುಣವಿಶಿಷ್ಟನಾದ ನಿಮ್ಮ ದೇವರನ್ನಲ್ಲ. ಸಗುಣನಾದ ದೇವರನ್ನೇ ಗ್ರಹಿಸಿದರೂ ಉತ್ತರವುಂಟು. ಮನುಷ್ಯನು ತನ್ನ ಕೆಲಸಗಳನ್ನು ಮಾಡಲು ಸ್ವತಂತ್ರನಾಗಿರುತ್ತಾನೆ. ಈಶ್ವರನ ರಾಜ್ಯದಲ್ಲಿ ಎಲ್ಲರಿಗೂ ಸ್ವಾತಂತ್ರ್ಯವಿದೆ. ಎಲ್ಲರೂ ಸಂವಿಧಾನಬದ್ಧವಾದ ಕಾನೂನನ್ನು ಪಾಲಿಸಲೇಬೇಕು. **''ಶ್ರುತಿಸ್ಮೃತೀ ಮಮೈವಾಜ್ಞೇ''** ಎಂದು ಈಶ್ವರನ ಆಜ್ಞೆಯೇ ಇದೆ. ಶ್ರುತಿ ಮತ್ತು ಸ್ಮೃತಿಗಳಲ್ಲಿ ಧರ್ಮ, ಅಧರ್ಮಗಳ ನಿರ್ಣಯವಿದೆ. ಧರ್ಮದಂತೆ ನಡೆದರೆ ಸತ್ಫಲ. ಅಧರ್ಮದಂತೆ ನಡೆದರೆ ದುಷ್ಟ ಫಲ. ಈ ಕಾನೂನನ್ನು ಮೀರಿದರೆ ಅದರ ಫಲವನ್ನು ಅನುಭವಿಸಲೇಬೇಕು. ಅವರು ಯಾವ ಬಗೆಯ ಕರ್ಮವನ್ನು ಮಾಡುತ್ತಾರೆ ಎಂಬುದಕ್ಕೆ ಲೋಕದಲ್ಲಿರುವಂತೆ ಹೊರಗಡೆಯ ಸಾಕ್ಷಿಗಳು ಬೇಕಿಲ್ಲ. ಈಶ್ವರನೇ ಸಾಕ್ಷಿ. ಈಶ್ವರನೇ ನ್ಯಾಯಾಧಿಪತಿ. ಇದರಲ್ಲಿ ವಿರೋಧವೇನು?

**ಪ್ರಶ್ನೆ**:- ಮನುಷ್ಯನು ದುಷ್ಕರ್ಮವನ್ನು ಮಾಡುವಾಗ ಅವನನ್ನು ತಡೆಯಬಹುದು. ಪ್ರಾಣ ಸಂಕಟಕ್ಕೆ ಸಿಕ್ಕಿದಾಗ ಕರುಣೆ ತೋರಬಹುದು.

**ಉತ್ತರ** :- ಇದು ಅತಿಪ್ರಶ್ನೆಯಾಯಿತು. ಜನರ ಸ್ವಾತಂತ್ರ್ಯಕ್ಕೆ ಈಶ್ವರನು ಅಡ್ಡಬರುವುದಿಲ್ಲವೆಂದು ಹೇಳಿದ್ದಾಗಿದೆ. ಪ್ರಾಣಸಂಕಟಕ್ಕೆ ಸಿಲುಕಿದಾಗ ಕರುಣಾಳುವಾದವನು ಏಕೆ ರಕ್ಷಿಸುವುದಿಲ್ಲ ಎಂಬ ಪ್ರಶ್ನೆಯೂ ಅಸಂಗತ. ಮೋಟಾರ್ ಸೈಕಲ್ಲಿನ ಮೇಲೆ ಎದುರು ಬದುರಾಗಿ ಬಂದು ಇಬ್ಬರು ಸವಾರರು ಢಿಕ್ಕಿ ಹೊಡೆಸಿಕೊಳ್ಳುವಾಗ ಈಶ್ವರನು ಮಧ್ಯೆ ಬಂದು ಸೈಕಲ್‌ಗಳನ್ನು ಹಿಡಿದು ನಿಲ್ಲಿಸಬೇಕೆಂದು ನಿಮ್ಮ ಅಭಿಪ್ರಾಯವೇ? ಸವಾರರ ದುಡುಕಿನ ಕೃತ್ಯಕ್ಕೆ ಈಶ್ವರನು ಹೊಣೆಯೆ? ಹಾಗೆಯೇ ಜನರು ಮಾಡಿದ ಪಾಪಕೃತ್ಯಕ್ಕೆ ಕೆಟ್ಟ ಫಲವು ಸಂಭವಿಸುತ್ತದೆ.

ಅದಕ್ಕೆ ಈಶ್ವರನು ಹೊಣೆಯಲ್ಲ. ಯಾರು ಈಶ್ವರನಿಗೆ ಶರಣಾಗತರಾಗಿ ಭಕ್ತಿಯಿಂದ ಧ್ಯಾನಿಸುವರೋ ಅವರ ವಿಷಯದಲ್ಲಿ ದಯಾಭಿಕ್ಷೆ ಸಿದ್ಧವಾಗಿರುತ್ತದೆ. ಅಗ್ನಿಯಿದ್ದಂತೆ ಈಶ್ವರನ ಸ್ಥಿತಿಯೆಂದು ತಿಳಿಯಬೇಕು. ಯಾರು ಹತ್ತಿರ ಹೋಗುತ್ತಾರೋ ಅವನ ಚಳಿ ಹೋಗುತ್ತದೆ. ಯಾರು ದೂರ ಇರುತ್ತಾರೋ ಅವರ ಚಳಿ ಹೋಗುವುದಿಲ್ಲ. ಬೆಂಕಿಯು ಎಲ್ಲರ ಚಳಿಯನ್ನು ಹೋಗಲಾಡಿಸಬಲ್ಲದು ಎಂಬುದಕ್ಕೆ ಯಾವ ಅಪವಾದವೂ ಇಲ್ಲ. ಭಗವದ್ಗೀತೆಯಲ್ಲಿ -

**''ಯೇ ಯಥಾ ಮಾಂ ಪ್ರಪದ್ಯಂತೇ ತಾನ್ ತಥೈವ ಭಜಾಮ್ಯಹಮ್''** ಎಂದು ಭಗವಂತನು ಹೇಳಿಯೇ ಇದ್ದಾನೆ.

**ಪ್ರಶ್ನೆ** :- ಪರಮಾತ್ಮನು **''ಕೇವಲೋನಿರ್ಗುಣಶ್ಚ''** ಎಂದು ಹೇಳುತ್ತೀರಿ. ನಿರ್ಗುಣವಾದ ಒಂದು ವಸ್ತು ಇರುವುದೇ ಇಲ್ಲ.

**ಉತ್ತರ** :- ಏಕಿರಬಾರದು? ನಿರ್ಗುಣವಲ್ಲದ ವಸ್ತು ನಿತ್ಯವಾಗುವುದೇ ಇಲ್ಲ. ಈ ಸತ್ಯವನ್ನು ವಿಜ್ಞಾನವೂ ಒಪ್ಪಿದೆ. ಪರಮಾತ್ಮನು ನಿರ್ಗುಣನಾದ್ದರಿಂದ ಸತ್ಯ. ವಿಜ್ಞಾನಿಗಳು ''Everything is energy'' ಎಂದು ಸಿದ್ಧಾಂತಿಸಿದ್ದಾರೆ. ಎನರ್ಜಿ ಎಂದರೆ ಒಂದಾನೊಂದು ಶಕ್ತಿ ವಿಶೇಷ. ಅದೇ ಜಗತ್ತಾಗಿ ಪರಿಣಮಿಸಿದೆ ಎಂದು ಅವರ ನಿರ್ಣಯ. ಭಾರೀ ಭಾರೀ ಯಂತ್ರಗಳನ್ನು ನಡೆಸುವುದು ಈ ಎನರ್ಜಿಯಿಂದ. ಅದಕ್ಕೆ ಶಬ್ದ ಸ್ಪರ್ಶಾದಿ ಯಾವ ಗುಣವೂ ಇಲ್ಲ. ಅದೇ ಜಡವಸ್ತುಗಳನ್ನೂ ನಿರ್ಮಿಸಿಕೊಳ್ಳುತ್ತದೆ. ಯಂತ್ರಗಳು ನಡೆಯುವಂತೆ ತಳ್ಳುತ್ತದೆ. ವಿದ್ಯುಚ್ಛಕ್ತಿಯು ತಂತಿಗಳಲ್ಲಿ ಹರಿದು ಬಂದು ಬಲ್ಬುಗಳಲ್ಲಿ ದೀಪವಾಗಿ ಬೆಳಗುತ್ತದೆ. ಪರಬ್ರಹ್ಮವು ಒಂದು ಎನರ್ಜಿಯಂತಹ ಶಕ್ತಿವಿಶೇಷ. ಇದೇ ಚೈತನ್ಯ. ವಿಜ್ಞಾನಿಗಳ ಎನರ್ಜಿಗೆ ಜ್ಞಾನಶಕ್ತಿ ಇಲ್ಲ. ಪರಬ್ರಹ್ಮವಾದರೋ ಜ್ಞಾನ ಸ್ವರೂಪ. **''ಸತ್ಯಂ ಜ್ಞಾನಮನಂತಂ ಬ್ರಹ್ಮ''**, **''ವಿಜ್ಞಾನಮಾನಂದಂ ಬ್ರಹ್ಮ''**, **''ಪ್ರಜ್ಞಾನಂ ಬ್ರಹ್ಮ''**. ಪರಬ್ರಹ್ಮ ಚೈತನ್ಯವು ಜ್ಞಾನ, ವಿಜ್ಞಾನ, ಪ್ರಜ್ಞಾನ. ಇದು ನಿರ್ಗುಣವೇ ಹೌದು. ವೇದವಾಕ್ಯದ ಮೇಲೆ ದಾಳಿ ಮಾಡುವುದು ಯುಕ್ತವಲ್ಲ. ಮಾಯಾಶಕ್ತಿಸಮೇತನಾದ ಈಶ್ವರನು

ಸಗುಣನೆಂಬುದು ನಮಗೆ ಸಂಮತ.

ಈ ಪ್ರಕಾರವಾದ ನಾಸ್ತಿಕರ ಪ್ರಶ್ನೆಗಳಿಗೆ ಉತ್ತರ ಹೇಳಿ ಮುಗಿಸಲು ಸಾಧ್ಯವೇ ಇಲ್ಲ. ವಾಲ್ಮೀಕಿ ರಾಮಾಯಣ, ವ್ಯಾಸ ಭಾರತ ಮುಂತಾದ ಲೋಕೋತ್ತರ ನೀತಿ ಪ್ರತಿಪಾದಕ ಗ್ರಂಥಗಳನ್ನು ದೂರುವುದು ನಿಲ್ಲುವುದೇ ಇಲ್ಲ. ರಾವಣನನ್ನು ಕೊಲ್ಲಲು ವಿಷ್ಣುವು ರಾಮನಾಗಿ ಅವತರಿಸಬೇಕೆ? ಸರ್ವಶಕ್ತನಾದ ದೇವರು ವೈಕುಂಠದಲ್ಲೇ ಇದ್ದು ಅವನನ್ನು ಕೊಲ್ಲಲಾಗುತ್ತಿರಲಿಲ್ಲವೇ? ಕಂಸನನ್ನು ಸಂಹರಿಸಲು ಕೃಷ್ಣನಾಗಿ ಅವತರಿಸಬೇಕೆ ? ಧೃತರಾಷ್ಟ್ರ, ದುರ್ಯೋಧನ, ದುಃಶಾಸನ ಮುಂತಾದವರನ್ನು ಏಕೆ ಸೃಷ್ಟಿಸಬೇಕಾಗಿತ್ತು? ಅವರ ದುಷ್ಕೃತ್ಯಗಳನ್ನು ನೋಡುತ್ತಾ ಸುಮ್ಮನೆ ಕುಳಿತಿದ್ದ ಭೀಷ್ಮ ದ್ರೋಣಾದಿಗಳ ಯೋಗ್ಯತೆ ಎಂಥಾದ್ದು ಇತ್ಯಾದಿ ಆಕ್ಷೇಪಗಳ ಹೊರೆಯನ್ನು ತೂರಿ ದೇವರನ್ನು ದೂರುವುದು ಮುಗಿಯುವುದೇ ಇಲ್ಲ. ಹೀಗೆ ದೂರುವುದು, ಜೀರುವುದು, ಹಾರುವುದು, ಹೋರುವುದು ಒತ್ತಟ್ಟಿಗಿರಲಿ .

ಈ ಲೋಕದಲ್ಲಿ ಎಲ್ಲವೂ ಕಾರ್ಯಕಾರಣಭಾವಗಳನ್ನು ಅನುಸರಿಸಿ ನಡೆಯುತ್ತಿದೆಯೆಂಬುದು ಸ್ಪಷ್ಟವಾಗಿದೆ. ಜಗತ್ತು ಎಂಬ ಒಂದು ಮಹಾಕಾರ್ಯಕ್ಕೆ ಮೂಲಕಾರಣ ಒಂದು ಇದ್ದೇ ಇರಬೇಕು. ಅದು ಯಾವುದೆಂಬುದನ್ನು ಮನುಷ್ಯ ಬುದ್ಧಿಯು ನಿರ್ಣಯಿಸಲಾರದೆ ಈಶ್ವರನೊಬ್ಬನು ಇರಲೇಬೇಕೆಂದೂ ಅವನು ಸರ್ವಜ್ಞನೂ, ಸರ್ವಶಕ್ತನೂ ಆಗಿದ್ದಾನೆಂದೂ ನಮ್ಮ ವಾದವನ್ನು ಮುಂದೆ ಇಟ್ಟಿದ್ದೇನೆ. ಇದಕ್ಕೆ ಅನುಗುಣವಾಗಿ ಪೇಲಿ (PALEY) ಎಂಬವನ ತರ್ಕವನ್ನು ಇಲ್ಲಿ ಉದಾಹರಿಸಬಹುದು. ಗಡಿಯಾರವೆಂಬ ಒಂದು ಸಾಮಾನ್ಯವಾದ ಯಂತ್ರವನ್ನೇ ಉದಾಹರಣೆಯಾಗಿಟ್ಟು ತನ್ನ ವಾದವನ್ನು ಮಂಡಿಸುತ್ತಾನೆ. ಗಡಿಯಾರದಲ್ಲಿ ಎಷ್ಟೋ ಚಕ್ರಗಳಿರುತ್ತವೆ. ಅದರಲ್ಲೊಂದು ಸ್ಪ್ರಿಂಗ್ ನಿರ್ದಿಷ್ಟ ವೇಗದಲ್ಲಿ ಬಿಚ್ಚಿಕೊಳ್ಳುತ್ತದೆ. ಅದರ ಚಲನೆಯಿಂದ ಘಂಟೆ, ನಿಮಿಷ , ಸೆಕೆಂಡುಗಳನ್ನು ತೋರಿಸುವ ಮುಳ್ಳುಗಳು ಚಲಿಸಿ ಕಾಲವನ್ನು ತೋರಿಸುತ್ತದೆ. ಇಂತಹ ಗಡಿಯಾರವನ್ನು ನಿರ್ಮಿಸುವ ಒಬ್ಬ ಶಿಲ್ಪಿ ಇರಲೇಬೇಕು. ಹೀಗಿರುವಾಗ ಈ ಮಾನವ ದೇಹದಲ್ಲಿ ಲೆಕ್ಕವಿಲ್ಲದಷ್ಟು

ಬಿಡಿಭಾಗಗಳಿವೆ. ಇವೆಲ್ಲವೂ ಆಶ್ಚರ್ಯಕರವಾದ ರೀತಿಯಲ್ಲಿ ಒಂದಕ್ಕೊಂದು ಹೊಂದಿಕೊಂಡು ಕೆಲಸ ಮಾಡುತ್ತವೆ. ಇಂಥ ದೇಹವೆಂಬ ಯಂತ್ರವನ್ನು ನಿರ್ಮಿಸಿದವನು ಒಬ್ಬನಿರಲೇಬೇಕು. ಅವನೇ ದೇವರು - ಎಂದು ಈತನ ವಾದ. ಈ ವಿಚಾರವನ್ನು **"ಏತಸ್ಮಾತ್ ಕಿಮಿವೇಂದ್ರಜಾಲಮಪರಂ ಯದ್ಗರ್ಭವಾಸೇ ಸ್ಥಿತಮ್"** ಎಂಬ ಶ್ಲೋಕದಲ್ಲಿ ಹಿಂದೆಯೇ ಸಮರ್ಥವಾಗಿ ವಿವರಿಸಿದ್ದೇವೆ. ಇನ್ನೂ ಮುಂದೆ ಹೋಗಿ ಈ ಬ್ರಹ್ಮಾಂಡವನ್ನೇ ಉದಾಹರಿಸಬಹುದು. ಸೂರ್ಯ, ಚಂದ್ರ, ನಕ್ಷತ್ರಾದಿಗಳು ಗಗನದಲ್ಲಿ ನಿರಾಧಾರವಾಗಿ ಹೇಗೆ ನಿಂತಿವೆ? ಗೊತ್ತಾದ ಕಾಲದಲ್ಲಿ ಇವು ಹೇಗೆ ಚಲಿಸುತ್ತವೆ? ಅವುಗಳಲ್ಲಿ ಆಕರ್ಷಣಶಕ್ತಿ ಹೇಗೆ ಬಂದಿತು? ಇತ್ಯಾದಿ ವಿಚಾರಗಳನ್ನು ಸೂಕ್ಷ್ಮವಾಗಿ ಹಿಂದೆಯೇ ಪ್ರಸ್ತುತಪಡಿಸಲಾಗಿದೆ. ಈ ಬ್ರಹ್ಮಾಂಡವು ಎಲ್ಲಿ ಮುಗಿಯುತ್ತದೆ. ಮುಗಿದ ಮೇಲೆ ಮುಂದೆ ಏನಿದ್ದೀತು? ಎಂಬುದು ಮನುಷ್ಯನ ಊಹೆಗೆ ಸಹ ನಿಲುಕದಷ್ಟು ಗಂಭೀರವಾಗಿದೆ. ಇಂತಹ ಅದ್ಭುತವಾದ ಸೃಷ್ಟಿಯನ್ನು ನಿರ್ಮಿಸಿದವನು ಒಬ್ಬನಿರಬೇಕು, ಅವನು ಯಾರು? ಎಂಬ ಪ್ರಶ್ನೆ ಉಳಿದುಕೊಳ್ಳುತ್ತದೆ. ಹೀಗೆ ನಿರ್ಮಿಸಿದವನು ಈಶ್ವರನಾದರೆ ಅವನನ್ನು ನಿರ್ಮಿಸುವವನು ಯಾರು? ಎಂಬ ಪ್ರಶ್ನೆ ಏಳುತ್ತದೆ. ಇದಕ್ಕೆ ನಿಲುಗಡೆ ಇಲ್ಲದೇ ಅನವಸ್ಥಾ ಪ್ರಸಂಗವು ಒದಗುತ್ತದೆ. ಆದ್ದರಿಂದ , ಒಂದೆಡೆಯಲ್ಲಿ ನಾವು ನಿಲ್ಲಲೇಬೇಕು. ಅದು ಅನಾದಿಯೆಂದು ಒಪ್ಪಲೇಬೇಕು. ಹೀಗಿರುವಾಗ ಈ ಬ್ರಹ್ಮಾಂಡದಲ್ಲಿಯೇ ನಿಂತುಬಿಡುವುದು ಯುಕ್ತವಲ್ಲವೆ? ಈಶ್ವರಪರ್ಯಂತ ಹೋಗಬೇಕಾದ್ದೇಕೆ? ಎಂಬ ಪ್ರಶ್ನೆ ಹುಟ್ಟುತ್ತದೆ.

ಈ ಪ್ರಶ್ನೆಗೆ ಸರಿಯಾದ ಉತ್ತರವುಂಟು. ಅನಾದಿಯಾದ ಒಂದು ವಸ್ತುವನ್ನು ಒಪ್ಪಿದಾಗ ಅದು ಅನಂತವೆಂದೂ ಅಂಗೀಕರಿಸಬೇಕು. ಈ ಜಗತ್ತಾದರೋ ನಮ್ಮ ಕಣ್ಣೆದುರಿಗೇ ಹುಟ್ಟಿ ಸಾಯುವ ಸ್ಥಾವರ ಜಂಗಮ ವಸ್ತುಗಳಿಂದ ತುಂಬಿದೆ. ಯಾವುದು ಹುಟ್ಟುತ್ತದೆಯೋ ಅದು ನಾಶವಾಗಲೇಬೇಕು ಎಂಬುದು ನಮ್ಮ ಶಾಸ್ತ್ರೀಯವಾದ ನಿಯಮ. ಇದನ್ನು ವಿಜ್ಞಾನಿಗಳೂ ಅಂಗೀಕರಿಸಿದ್ದಾರೆ. ಯಾವುದು ಸಗುಣವೂ, ಸಕ್ರಿಯವೂ ಆಗಿದೆಯೋ [ATRIBUTES ಗಳಿಂದ ಕೂಡಿದೆಯೋ] ಅದು

ನಾಶವಾಗುತ್ತದೆಯೆಂದು ಉಭಯಸಂಮತವಾದ ನಿಯಮ. ಕೆಲವು ವಿಜ್ಞಾನಿಗಳ ಪ್ರಕಾರ 'ಬಿಗ್ ಬ್ಯಾಂಗ್ ಥಿಯರಿ' ಯಂತೆ ಜಗತ್ತಿನ ನಿರ್ಮಾಣವಾಗಿದೆ. ಆದ್ದರಿಂದ, ಇದರ ನಾಶವೂ ಉಂಟು ಎಂದು ಒಪ್ಪಲೇಬೇಕು. ಅದ್ಭುತ ವೈವಿಧ್ಯಗಳಿಂದ ಕೂಡಿದ ಅನಂತ ಪದಾರ್ಥಗಳನ್ನು ಅನಾದಿಯೆಂದೂ ಅನಂತವೆಂದೂ ಒಪ್ಪುವುದು ಅಸಂಗತವಾಗುತ್ತದೆ. ಅದಕ್ಕಿಂತ ಒಬ್ಬ ಈಶ್ವರನನ್ನು ಅಂಗೀಕರಿಸಿ ಅಲ್ಲಿಗೆ ನಿಲ್ಲುವುದು ಅತ್ಯಂತ ಸಮಂಜಸವಾದ ನಿರ್ಣಯವಾಗಿದೆ. ಈ ಈಶ್ವರನಾದರೂ ಸಗುಣನೂ ಸಕ್ರಿಯನೂ ಆಗಿದ್ದಾನಲ್ಲವೇ? ಎಂಬ ಪ್ರಶ್ನೆಗೆ ಈಶ್ವರನು ಪರಮಾರ್ಥದಲ್ಲಿ ಪರಬ್ರಹ್ಮೇ ಎಂಬುದು ವೇದಸಮ್ಮತವಾದ ಉತ್ತರವಾಗಿದೆ. ಈ ಪರಬ್ರಹ್ಮವು ನಿರ್ಗುಣವೂ , ನಿಷ್ಕ್ರಿಯವೂ, ನಿಷ್ಕಲವೂ, ನಿರಂಜನವೂ ಆದದ್ದು. ಇದು ವೇದಪ್ರತಿಪಾದ್ಯವಾದದ್ದು. ಇದಕ್ಕೆ ಪ್ರತಿದ್ವಂದ್ವಿಯಾದ ಸಮಾಧಾನವನ್ನು ಯಾರೂ ಹೇಳಲಾರರು. ಸಗುಣವೂ, ಸಕ್ರಿಯವೂ ಆದ ಪ್ರಪಂಚವು ನಿತ್ಯವಲ್ಲ. ಶೂನ್ಯದಿಂದ ಯಾವ ವಸ್ತುವೂ ಹುಟ್ಟುವುದಿಲ್ಲ. ಅಲ್ಲಿಗೆ ಈ ವಾದವು ನಿಂತುಹೋಗಲೇಬೇಕು.

ಭಗವದ್ಗೀತೆಯ ಹದಿನಾರನೆಯ ಅಧ್ಯಾಯದಲ್ಲಿ ದೈವಾಸುರಸಂಪದ್ವಿಭಾಗಯೋಗವು ಬಂದಿದೆ. ಇದರಲ್ಲಿ ನಾಸ್ತಿಕರಿಗೆ ಶ್ರೀಕೃಷ್ಣನು ಸರಿಯಾದ ಪಾಠವನ್ನು ಹೇಳಿದ್ದಾನೆ. ಈ ಜನರು ಆಸುರೀಸಂಪತ್ತಿನವರು.

**''ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ ॥''** (ಭಾಗ ೧೬-೪)

ಆಸುರೀಸಂಪತ್ತನ್ನು ಪಡೆದವರಿಗೆ ಜಂಭ, ದರ್ಪ, ತಾನು ಬಲ್ಲವನೆಂಬ ದುರಭಿಮಾನ, ಸಿಟ್ಟು, ಒರಟು ಮಾತು, ಅಜ್ಞಾನ ಎಂಬಿವು ಸೇರಿಕೊಂಡಿರುತ್ತವೆ. ಈ ಜನರು ಹೇಳುವುದೇನೆಂದರೆ -

**''ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।**
**ಅಪರಸ್ಪರಸಂಭೂತಂ ಕಿಮನ್ಯತ್ ಕಾಮಹೈತುಕಮ್॥''** (ಭ. ಗೀ. ೧೬-೮)

''ಈ ಜಗತ್ತೆಲ್ಲವೂ ಸುಳ್ಳಿನಿಂದ ತುಂಬಿದೆ. ಇದಕ್ಕೆ ಧರ್ಮಾಧರ್ಮಗಳ ಆಧಾರವೇನೂ ಇಲ್ಲ. ಕಾಮದಿಂದ ಪ್ರೇರಿತವಾದ ಸ್ತ್ರೀಪುರುಷರ ಅನ್ಯೋನ್ಯ ಸಂಯೋಗದಿಂದ ಪ್ರಾಣಿಗಳು ಹುಟ್ಟುತ್ತವೆ. ಈ ಜಗತ್ತಿನ ಸ್ಥಿತಿ ಇಷ್ಟೇ. ಇನ್ನೇನು?''

ಈ ಜನರು ಈಶ್ವರನನ್ನು ನಂಬತಕ್ಕವರೆಲ್ಲರೂ ಮೂಢರೆಂದು ತಿಳಿದಿದ್ದಾರೆ. ಸಾಂಖ್ಯರಾಗಲಿ, ಮೀಮಾಂಸಕರಾಗಲಿ ತಮ್ಮ ಒಂದಾನೊಂದು ಸಿದ್ಧಾಂತವನ್ನು ಪೋಷಿಸುವುದಕ್ಕಾಗಿ ನಿರೀಶ್ವರ ವಾದವನ್ನು ಮಂಡಿಸಿದ್ದಾರೆ. ವ್ಯಾಖ್ಯಾನಕಾರರು ತಮ್ಮ ಪಾಂಡಿತ್ಯವನ್ನು ಪ್ರಖರವಾದ ತರ್ಕಬಲದಿಂದ ಸ್ಥಾಪಿಸಿಕೊಂಡಿದ್ದಾರೆ. ಅವರ ತರ್ಕದ ಎದುರಿಗೆ ಈ ನಾಸ್ತಿಕರ ತರ್ಕವೆಲ್ಲವೂ ಅತ್ಯಂತ ಪೇಲವವಾಗುತ್ತದೆ. ಬಾಲಿಶವೆನಿಸುತ್ತದೆ. ಸಾಂಖ್ಯರ ಸಿದ್ಧಾಂತವು ಕಡೆಯಲ್ಲಿ ಪಾತಂಜಲಿಯೋಗಕ್ಕೆ ಮಣಿದು ಸೇಶ್ವರಸಾಂಖ್ಯವಾಯಿತು. ಮೀಮಾಂಸಕರಲ್ಲಿ ಅಗ್ರಗಣ್ಯನಾದ ಖಂಡದೇವನೆಂಬ ಮಹಾವಿದ್ವಾಂಸನು ಈಶ್ವರನಿಲ್ಲವೆಂಬ ವಾದವನ್ನು ಭಟ್ಟದೀಪಿಕೆಯಲ್ಲಿ ತನ್ನ ಕರ್ಕಶಯುಕ್ತಿಗಳಿಂದ ಹಲವಾರು ಬಗೆಯಲ್ಲಿ ವಾದಿಸಿ ಸ್ಥಾಪಿಸಿದ್ದಾನೆ. ಅನಂತರ ಅವನೇ ಹೇಳುವ ಈ ಮಾತು ಗಮನಾರ್ಹವಾದದ್ದು. **''ಮಮ ತು ಏವಂ ವದತಃ ವಾಣೀ ದುಷ್ಯತೀತಿ ಹರಿಸ್ಮರಣಮೇವ ಶರಣಮ್''** - ಇಂದ್ರಾದಿ ಶಬ್ದಕ್ಕಿಂತ ಬೇರೆ ಈಶ್ವರನಿಲ್ಲವೆಂದು ವಾದಿಸುವ ನನ್ನ ನಾಲಿಗೆ ದೋಷಯುಕ್ತವಾಗಿದೆ. ಇದಕ್ಕೆ ಶ್ರೀಹರಿಯ ಸ್ಮರಣೆಯೇ ಶರಣು!

ಬ್ರಹ್ಮವಲ್ಲಿಯಲ್ಲಿ ಈ ರೀತಿಯಿದೆ -

**''ಅಸನ್ನೇವ ಸ ಭವತಿ. ಅಸದ್ ಬ್ರಹ್ಮೇತಿ ವೇದ ಚೇತ್. ಅಸ್ತಿ ಬ್ರಹ್ಮೇತಿ ಚೇದ್ವೇದ. ಸಂತಮೇನಂ ತತೋ ವಿದುಃ''**

ಇದರ ತಾತ್ಪರ್ಯವೇನೆಂದರೆ -ಬ್ರಹ್ಮವು ಇಲ್ಲ ಎಂದು ಹೇಳತಕ್ಕವನು ತಾನೇ ಇಲ್ಲವಾಗುತ್ತಾನೆ. ಯಾವನು ಇಲ್ಲವೆನ್ನುತ್ತಾನೋ, ಅವನೇ ಸ್ವತಃ ಬ್ರಹ್ಮವಾಗಿರುತ್ತಾನೆ. ಅದ್ವೈತಸಿದ್ಧಾಂತದಂತೆ ಜೀವಾತ್ಮನೇ ಪರಬ್ರಹ್ಮ. ಅದರಂತೆ ಬ್ರಹ್ಮವಿಲ್ಲವೆಂದರೆ

ತಾನೇ ಇಲ್ಲವೆಂದರ್ಥವಾದೀತು. ದ್ವೈತಸಿದ್ಧಾಂತದಂತೆ ಬ್ರಹ್ಮವಿಲ್ಲವೆಂಬತಕ್ಕವನು ಅಸನ್ = ಅಯೋಗ್ಯ ; ದುಷ್ಟನೆಂದರ್ಥ. ಅವನಿಗೆ ಯಾವ ಪುರುಷಾರ್ಥವೂ ಇಲ್ಲ. ಹೀಗೆ ಉಭಯ ಪಕ್ಷದಲ್ಲಿಯೂ ಬ್ರಹ್ಮವಿದೆ ಈಶ್ವರನಿದ್ದಾನೆ - ಎಂದು ಉಪನಿಷತ್ತು ನಿರ್ಣಯಿಸಿ ಹೇಳಿದೆ. ಉಪನಿಷತ್ತನ್ನೇ ನಂಬದವನಿಗೆ ಯಾವುದರಲ್ಲೂ ನಂಬಿಕೆಯೇ ಇಲ್ಲವೆಂದಾಗುತ್ತದೆ. ಭಗವಂತನನ್ನು ಸಾಕ್ಷಾತ್ಕರಿಸಿಕೊಂಡ ಶ್ರೀರಾಮಕೃಷ್ಣ ಪರಮಹಂಸರೇ ಹೇಳಿದರೂ ಈ ಜನರು ನಂಬುವುದಿಲ್ಲ. ಸ್ವಾಮಿ ವಿವೇಕಾನಂದರಂಥವರು ಪರಮಹಂಸರನ್ನು ನಂಬಿ ಶರಣಾದರು.

ಈ ಜನರಿಗೆ ಭಕ್ತಿ, ಶ್ರದ್ಧೆ, ತಪಸ್ಸು, ಯೋಗ - ಇವುಗಳಲ್ಲಿ ನಂಬಿಕೆಯಿಲ್ಲ. ತಪಸ್ವಿಗಳು, ಯೋಗಿಗಳು ಎಂದು ಜಗತ್ಪ್ರಸಿದ್ಧರಾಗಿರತಕ್ಕವರ ಮಾತುಗಳನ್ನೂ ನಂಬುವುದಿಲ್ಲ. ವಿವೇಕಾನಂದರಂಥ ವಿಚಾರಶೀಲರು ಈಶ್ವರನಿದ್ದಾನೆಂದು ನಂಬಿಕೆಯಿಲ್ಲದೆ ಶ್ರೀರಾಮಕೃಷ್ಣಪರಮಹಂಸರ ಬಳಿಗೆ ಹೋಗಿ ''ನೀವು ದೇವರನ್ನು ನೋಡಿದ್ದೀರಾ? '' ಎಂದು ಪ್ರಶ್ನೆ ಮಾಡಿದರು. ಪರಮಹಂಸರು ಇವರ ಮುಖವನ್ನು ನೋಡಿ ''ನಾನು ನೋಡಿದ್ದೇನೆ. ನಿನಗೂ ತೋರಿಸುತ್ತೇನೆ, ಬಾ'' ಎಂದು ಹೇಳಿದರಂತೆ. ಅವರನ್ನು ಪರೀಕ್ಷಿಸಿಬಿಡಬೇಕೆಂದು ವಿವೇಕಾನಂದರು ಪರಮಹಂಸರ ಬಳಿ ಆಗಾಗ ಹೋಗಿಬರುತ್ತಾ ಕಡೆಗೆ ಅವರ ಶಿಷ್ಯರೇ ಆಗಿಬಿಟ್ಟರು. ಪರಮಹಂಸರು ಹೇಳಿದ ಅನೇಕ ಸಾಧನೆಗಳನ್ನು ಮಾಡಿ ತಮ್ಮ ಸಂದೇಹಗಳೆಲ್ಲವನ್ನೂ ಪರಿಹರಿಸಿಕೊಂಡರು. ವಿಶ್ವಧರ್ಮಸಮ್ಮೇಳನಕ್ಕಾಗಿ ಅಮೇರಿಕಾಕ್ಕೆ ಹೋಗಿ ತಮ್ಮ ಭಾಷಣಗಳಿಂದ ಸಮ್ಮೇಳನಕ್ಕೆ ಬಂದ ಸಕಲರನ್ನೂ ಮೆಚ್ಚಿಸಿದರು. ತಮ್ಮ ಗುರುಗಳಾದ ಪರಮಹಂಸರನ್ನು My Master ಎಂದು ಹೇಳುತ್ತಿದ್ದರು. ನಿರಕ್ಷರಕುಕ್ಷಿಗಳಾಗಿದ್ದ ಶ್ರೀರಾಮಕೃಷ್ಣ ವಿದ್ವಾಂಸರಾದ ವಿವೇಕಾನಂದರ ಗುರುಗಳೆನಿಸಿದರು. ಗಣಿತ ಶಾಸ್ತ್ರದಲ್ಲಿ ಪ್ರೊಫೆಸರ್ ಆಗಿದ್ದ ರಾಮತೀರ್ಥರ ಕಥೆ ಸರ್ವವಿದಿತವಾದುದು. ಐ. ಎ. ಎಸ್. ಪದವೀಧರರಾದ ಶ್ರೀ ಅರವಿಂದರು ಅಧ್ಯಾತ್ಮ ಮಾರ್ಗದಲ್ಲಿ ನಿರತರಾಗಿ ಜಗದ್ವಂದ್ಯರೆನಿಸಿದರು. ವಿದ್ಯಾಗಂಧವೂ ಇಲ್ಲದ ವೆಂಕಟರಮಣನು ಸರ್ವವಿದ್ಯಾಪಾರಂಗತರಾದ

ವಾಸಿಷ್ಠಗಣಪತಿ ಶಾಸ್ತ್ರಿಗಳಿಂದ ರಮಣಮಹರ್ಷಿಗಳೆಂದು ಪೂಜಿತನಾದನು. ನಾನಾ ದೇಶಗಳಲ್ಲಿದ್ದ ವಿಜ್ಞಾನಿಗಳೂ ರಮಣಮಹರ್ಷಿಗಳ ಶಿಷ್ಯರಾದರು.

ಒಟ್ಟಿನಲ್ಲಿ ಹೇಳುವುದಾದರೆ ಜನ್ಮಾಂತರ ಸಂಸ್ಕಾರವಿಲ್ಲದೆ ಅಧ್ಯಾತ್ಮ ವಿಚಾರದಲ್ಲಿ ಶ್ರದ್ಧೆ ಹುಟ್ಟುವುದೇ ಇಲ್ಲ. ಅವರಿಗೆ ಆತ್ಮ ವಿಚಾರದಲ್ಲಿ ಯಾವ ಆಸಕ್ತಿಯೂ ಇರುವುದಿಲ್ಲ. ಸ್ವತಃ ಬಹು ವಿಷಯಗಳನ್ನು ಬಲ್ಲ ವಿದ್ಯಾವಂತರಾದರೂ ಆತ್ಮವಿಚಾರದಲ್ಲಿ ನಂಬಿಕೆಯೇ ಇಲ್ಲದೆ, ಕಡೆಗೆ ಅಧ್ಯಾತ್ಮ ವಿರೋಧಿಗಳೇ ಆಗಿಬಿಡುತ್ತಾರೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಹೇಳಿದಂತೆ ಈ ಜನರು ತಮೋಗುಣಾನ್ವಿತರು ಎಂದು ಹೇಳಿ ಕೈಬಿಡಬಹುದು. ಕಠೋಪನಿಷತ್ತಿನಲ್ಲಿ ಹೇಳಿರುವ ಈ ಉಕ್ತಿಯನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು -

**''ಭಿದ್ಯತೇ ಹೃದಯಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ।**
**ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥''**

ಈ ಪರಬ್ರಹ್ಮನ ಸಾಕ್ಷಾತ್ಕಾರವಾದಾಗ ಮಾನವನ ಹೃದಯಗತವಾದ ಅಜ್ಞಾನವೆಂಬ ಗ್ರಂಥಿಯು ಬಿಚ್ಚಿ ಹೋಗುವುದು. ಸಮಸ್ತ ಸಂಶಯಗಳೂ ಪರಿಹೃತವಾಗುತ್ತವೆ. ಆತನು ಮಾಡಿದ ಸರ್ವಕರ್ಮಗಳೂ ನಾಶವಾಗುತ್ತವೆ.

ಆದರೆ ವಿಶ್ವಾಸವಿಲ್ಲದೆ ಪರಬ್ರಹ್ಮನ ಸಾಕ್ಷಾತ್ಕಾರವಾಗುವುದು ಹೇಗೆ? **''ಶ್ರದ್ಧಾಹಿಪರಮಾಗತಿಃ''**

**''ಶ್ರೀ ವಿಷ್ಣು ವಿಶ್ವಾದಿಮೂಲ ಮಾಯಾಲೋಲ**
**ದೇವಸರ್ವೇಶ ಪರಬೊಮ್ಮನೆಂದು ಜನಂ ।**
**ಆವುದನು ಕಾಣದೊಡಮಳ್ತಿಯಿಂ ನಂಬಿಹುದೊ**
**ಆ ವಿಚಿತ್ರಕೆ ನಮಿಸೊ ಮಂಕುತಿಮ್ಮ ॥''**

----------------

“ಜಗಮಿದು ಜಗದೀಶ್ವರನಂ
ತೆಗಳ್ದಲ್ಲಗಳೆದು ಸೊಗಸಿಂ ಬಾಳ್ಗುಂನಿಜದೊಳ್ ।
ನೆಗಳ್ದೀ ದೇಹಮೆ ಜೀವಂ
ಬಗೆವೊಡೆ ಜೀವಾತ್ಮನನ್ಯನೆಂಬುದಸತ್ಯಂ ॥ ೧ ॥

ಸೊಲ್ಲುಗಳಿಂದೀ ಪರಿಯೊಳ್
ಹುಲ್ಲಿಗೆ ಸಮಮಪ್ಪ ಜೊಳ್ಳುಹೇತೂತ್ಕರದಿಂ ।
ಗೆಲ್ಲುತ ಮುಗ್ಧರ ಮನಮಂ
ಬಲ್ಲಿದರಾಮೆಂಬು ತಿರೆಯೊಳ್ ಮೆರೆವರ್ ಕೆಲಬರ್ ॥ ೨ ॥

ಕಿಚ್ಚಿನವೋಲ್ ಮುಚ್ಚುಗದೋಲ್
ಚುರ್ಚಿಯ ಗಿಡದೋಲ್ ಹೃದಯಮಂ ಸಜ್ಜನರಾ ।
ಚುರ್ಚುತ ಪೆರ್ಚಿದ ನುಡಿಗಳ
ಕೊಚ್ಚುತ ನುಚ್ಚಾಗಿಸಲೊರೆದೆನೀ ಕೃತಿಯಂ ಖತಿಯಿಂ ॥

ಬೆಚ್ಚನೆಯ ಮನೆಯುಂಟು ಮೆಚ್ಚುಗೆಯ ಪೆನ್ ಉಂಟು
ಹುಚ್ಚುಹುಚ್ಚಾಗಿ ಗೀಚುತ್ತ ಲೋಕಕ್ಕೆ
ಕಿಚ್ಚು ಹಚ್ಚಿಂದ ಸರ್ವಜ್ಞ॥

## ಶ್ರೀ ಭಗವತ್ಪಾದ ಪ್ರಕಾಶನ (ರಿ.)

### ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನ, ಮಠದೇವಳ, ಶಿರಸಿ

| | | |
|---|---|---|
| ೧. | *प्रल्हाद चरितं* | |
| ೨. | ಶ್ರೀ ಸ್ವರ್ಣವಲ್ಲೀ ದರ್ಶನ | ೧-೦೦ |
| ೩. | ಶ್ರೀ ಸರ್ವಜ್ಞೇಂದ್ರ ಚಂಪೂ | ೫೦-೦೦ |
| ೪. | ಯತಿಪರಿಚಯ | |
| ೫. | ರುದ್ರಮಂತ್ರ ಪುರಶ್ಚರಣ | ೫-೦೦ |
| ೬. | ಪ್ರಾರ್ಥನಾ ಪಂಚಕಂ | |
| ೭. | ಶ್ರೀ ಪೀಠಾರೋಹಣ | ೧೦೦-೦೦ |
| ೮. | ಶ್ರೀ ಸರ್ವಜ್ಞೇಂದ್ರ ಸರಸ್ವತೀ | ೩೦-೦೦ |
| ೯. | ಸ್ವರ್ಣವಲ್ಲೀ ಪ್ರಕಾಶ | ೬-೦೦ |
| ೧೦. | ಬೋಧಾಯನೋಕ್ತ ಸಂಧ್ಯಾವಿಧಿಃ | ೨೦-೦೦ |
| ೧೧. | ಸ್ವರ್ಣವಲ್ಲೀ ಸುಧಾ ಕುಸುಮ-೧ | ೧೦-೦೦ |
| ೧೨. | ಸ್ವರ್ಣವಲ್ಲೀ ಸುಧಾ ಕುಸುಮ-೨ | ೧೦-೦೦ |
| ೧೩. | ದಾರಿದೀವಿಗೆ | ೫-೦೦ |
| ೧೪. | ಸ್ತೋತ್ರಗಳು | ೫-೦೦ |
| ೧೫. | ಶ್ರೀ ರಾಮರಕ್ಷಾ ಸ್ತೋತ್ರ | ೫-೦೦ |
| ೧೬. | ವಿವಾಹ ಸಂಸ್ಕಾರ | ೨೫-೦೦ |
| ೧೭. | ಗಾಯತ್ರೀ ಜಪಯಜ್ಞ | ೨೫-೦೦ |
| ೧೮. | ಬೌಧಾಯನೀಯ ನಿತ್ಯಕರ್ಮ | ೨೫೦-೦೦ |
| ೧೯. | ಸ್ವರ್ಣವಲ್ಲೀ ಮಹಾಸಂಸ್ಥಾನ (ಚರಿತ್ರ) | ೧೦೦-೦೦ |
| ೨೦. | *कृष्णयजुर्वेदस्वाहाकारविधिः भाग-१* | ೧೮೦-೦೦ |
| ೨೧. | ಭಗವದ್ಗೀತೆ ಅಧ್ಯಾತ್ಮ ವಿದ್ಯೆ ಸಂ. - ೧ | ೧೦೦-೦೦ |
| ೨೨. | ಶಂಕರಾಚಾರ್ಯರ ಸ್ತೋತ್ರ ರತ್ನಮಾಲೆ | ೪೦-೦೦ |
| ೨೩. | ಶ್ರೀ ಲಕ್ಷ್ಮೀನೃಸಿಂಹ ಕಲ್ಪೋಕ್ತ ಪೂಜಾವಿಧಿಃ | ೫೦-೦೦ |
| ೨೪. | ಶ್ರೀ ಸ್ವರ್ಣವಲ್ಲೀ ಗುರುವಂಶ ಚರಿತಂ | ೧೦೦-೦೦ |

| | | |
|---|---|---|
| ೨೫. | ಸಂದೇಶ ನುಡಿ | ೭೫-೦೦ |
| ೨೬. | ಶ್ರೀ ಸರ್ವಜ್ಞೇಂದ್ರರು | ೪೫-೦೦ |
| ೨೭. | ಸನಾತನ ಸಂಸ್ಕಾರಗಳು | ೫೦-೦೦ |
| ೨೮. | ಶ್ರೀ ಬೃಹತ್ ಗಂಗಾಧರೇಂದ್ರ ಸರಸ್ವತೀ | ೭೦-೦೦ |
| ೨೯. | *कृष्णयजुर्वेदस्वाहाकारविधिः भाग-२* | ೪೫೦-೦೦ |
| ೩೦. | ಶ್ರೀ ಶಂಕರಾಚಾರ್ಯರ ಅದ್ವೈತ ದರ್ಶನ | ೧೨೦-೦೦ |
| ೩೧. | ವಿಭೂತಿ ಪುರುಷ ವಿದ್ಯಾರಣ್ಯರು | ೬೫-೦೦ |
| ೩೨. | ಕನ್ನಡದಲ್ಲಿ ಶತಕ ಸಾಹಿತ್ಯ | ೨೪೦-೦೦ |
| ೩೩. | ಶ್ರೀ ಶ್ರೀ ಗಂಗಾಧರೇಂದ್ರ ಸರಸ್ವತೀ ಸ್ವಾಮಿಗಳ ಪೀಠಾರೋಹಣ ದಶಮಾನೋತ್ಸವ ಸ್ಮರಣ ಸಂಪುಟ | ೯೦-೦೦ |
| ೩೪. | ನಮ್ಮ ಪ್ರೀತಿಯ ಸ್ವಾಮೀಜಿ | ೧೦೦-೦೦ |
| ೩೫. | ಶ್ರೀ ಲಕ್ಷ್ಮೀನಾರಾಯಣ ಹೃದಯಂ | ೧೦-೦೦ |
| ೩೬. | ಶ್ರೀ ಲಕ್ಷ್ಮೀನಾರಾಯಣ ಪೂಜಾ ವಿಧಿಃ | ೧೦-೦೦ |
| ೩೭. | ಶ್ರೀ ಲಲಿತಾಸಹಸ್ರನಾಮ | ೨೫-೦೦ |
| ೩೮. | ಧರ್ಮಸಂದೇಶ | ೬೦-೦೦ |
| ೩೯. | ತಂತ್ರಸಮುಚ್ಚಯ | ೬೦೦-೦೦ |
| ೪೦. | ಶ್ರೀವಿದ್ಯಾ ಸ್ಮರಣ ಸಂಪುಟ | ೧೦೦-೦೦ |
| ೪೧. | ಮಾನವಧರ್ಮಶಾಸ್ತ್ರ ಮತ್ತು ಮಹಿಳೆಯರು | ೯೦-೦೦ |
| ೪೨. | ಆಲೋಕಯಾಂಬ ಲಲಿತೇ | ೪೦-೦೦ |
| ೪೩. | ಶ್ರೀ ದುರ್ಗಾರಾಧನಾ | ೬೦-೦೦ |
| ೪೪. | A History of the Swarnavalli Mahasamsthana | ೨೫೦-೦೦ |
| ೪೫. | ಪರಿಪೂರ್ಣವೂ ಅಖಂಡವೂ ಆದ ಅಂತಿಮ ಸತ್ಯವೇ ನಾನು | ೩೫೦-೦೦ |
| ೪೬. | *कृष्णयजुर्वेदस्वाहाकारविधिः भाग-३* | ೪೫೦-೦೦ |
| ೪೭. | ಶಾಸ್ತ್ರಪ್ರಭಾ (ಸ್ವರ್ಣವಲ್ಲೀಪ್ರಭಾ ವಿಶೇಷಾಂಕ) | ೧೫೦-೦೦ |
| ೪೮. | ಶ್ರೀ ವಿಷ್ಣುಸಹಸ್ರನಾಮ | ೨೦-೦೦ |
| ೪೯. | ಶ್ರೀ ಶಿವಸಹಸ್ರನಾಮ | ೨೦-೦೦ |
| ೫೦. | ಶ್ರೀ ಲಕ್ಷ್ಮೀಸಹಸ್ರನಾಮ | ೨೦-೦೦ |

| | | |
|---|---|---|
| ೫೧. | ಅಜ್ಜ ನೀಡುವ ಮದ್ದು | ೨೦-೦೦ |
| ೫೨. | ಸಂಕಷ್ಟಹರ ಗಣಪತಿ ಪೂಜಾ ವಿಧಿಃ ಸಹಸ್ರನಾಮ ಸಹಿತ | ೪೦-೦೦ |
| ೫೩. | ಅಮರ ಸಾಧನೆ (ನಾಟಕ) | ೩೦-೦೦ |
| ೫೪. | ಶ್ರೀ ಗುರುಗೀತ | ೩೦-೦೦ |
| ೫೫. | *कृष्णयजुर्वेदस्वाहाकारविधिः भाग-४* | ೪೫೦-೦೦ |
| ೫೬. | ಅಂತರ್ಜ್ಯೋತಿ | ೫೦-೦೦ |
| ೫೭. | ಸೂರ್ಯ ನಮಸ್ಕಾರ | ೩೦-೦೦ |
| ೫೮. | ಖೇಚರಿ ಯೋಗಿ | ೩೦-೦೦ |
| ೫೯. | ಶೇಷಸಮುಚ್ಚಯ | ೪೦೦-೦೦ |
| ೬೦. | Radiant Thoughts | ೮೦-೦೦ |
| ೬೧. | ಶ್ರೀ ಸರಸ್ವತಿ ಸಹಸ್ರನಾಮ | ೨೦-೦೦ |
| ೬೨. | ಶ್ರೀ ಗಂಗಾ ಪೂಜಾ | ೧೫-೦೦ |
| ೬೩. | ಸೋಂದಾದರ್ಶನ (ಕನ್ನಡ ಮತ್ತು ಇಂಗ್ಲೀಷ) | ೧೫-೦೦ |
| ೬೪. | ದೇವೋಪಚಾರ ಪೂಜಾ | ೧೦-೦೦ |
| ೬೫. | ಭಗವದ್ಗೀತಾ (ಮೂಲ) | ೧೫-೦೦ |
| ೬೬. | ಶ್ರೀ ಗಂಗಾಪೂಜಾ | ೧೫-೦೦ |
| ೧. | ಸಂಧ್ಯಾವಂದನೆ (ಕ್ಯಾಸೆಟ್) | ೩೦-೦೦ |
| ೨. | ಗಾಯತ್ರೀ ಮಹತ್ವ (ಕ್ಯಾಸೆಟ್) | ೩೦-೦೦ |
| ೩. | ಶಾಂಕರ ಸರಸ್ವತೀ (ಕ್ಯಾಸೆಟ್) | ೪೦-೦೦ |
| ೪. | ಶಾಂಕರ ಸರಸ್ವತೀ (ಸಿ. ಡಿ.) | ೫೦-೦೦ |
| ೬. | ಶ್ರುತಿ ಸಂಜೀವಿನಿ (ಕ್ಯಾಸೆಟ್) | ೪೦-೦೦ |
| ೭. | ಶ್ರುತಿ ಸಂಜೀವಿನಿ (ಸಿ. ಡಿ. ) | ೫೦-೦೦ |

"ಸ್ವರ್ಣವಲ್ಲೀಪ್ರಭಾ"
ಮಾಸಪತ್ರಿಕೆಗೆ
ಚಂದಾದಾರರಾಗಿ .

**: ಚಂದಾ ವಿವರ :**

| | | |
|---|---|---|
| ವಾರ್ಷಿಕ ಚಂದಾ | ರೂ. | ೧೦೦-೦೦ |
| ಮೂರು ವರ್ಷ ಚಂದಾ | ರೂ. | ೨೭೫-೦೦ |
| ಆಜೀವ ಚಂದಾ | ರೂ. | ೧,೫೦೦-೦೦ |
| ಆಜೀವ ಸದಸ್ಯರು | ರೂ. | ೨,೦೦೦-೦೦ |
| ಪೋಷಕರು | ರೂ. | ೫,೦೦೦-೦೦ |



ಏನನ್ನೂ ಅರಿಯದ ಅಜ್ಞರೂ, ಮುಗ್ಧ ನಂಬಿಗಸ್ಥರೂ ಆಸ್ತಿಕರಾಗಿರುತ್ತಾರೆ. ವಿದ್ವಾಂಸ ಪ್ರಾಜ್ಞರೂ ಆಸ್ತಿಕರು. ಆದರೆ ಅರೆಬರೆ ತಿಳಿದವರು ಮಾತ್ರ ನಾಸ್ತಿಕರಾಗಿರುವುದು ಕಂಡುಬರುತ್ತದೆ.

ಇವರಿಗೆ ದೇವರಲ್ಲಿ ನಂಬಿಕೆ ಇಲ್ಲದಿದ್ದರೆ, ತಮ್ಮ ಪಾಡಿಗೆ ಇದ್ದುಕೊಂಡಿರಲಿ. ನಂಬಿಕೆಯನ್ನು ಹುಟ್ಟಿಸಲು ಯಾರೂ ಒತ್ತಾಯ ಮಾಡುವುದಿಲ್ಲ.

ಆದರೆ ಇವರು ಪುಸ್ತಕಗಳನ್ನು ಬರೆದು ನಾಸ್ತಿಕ್ಯ ಬುದ್ಧಿಯನ್ನು ಜನರಲ್ಲಿ ಹಂಚುವುದು ಯಾವ ಉದ್ದೇಶದಿಂದ...? ಇಂಥವರು ಜನರಿಗೆ ಅಹಿತಕಾರಿಗಳೇ.

ಭಗವದ್ಗೀತೆಯ ಉಪದೇಶವು ಆಸ್ತಿಕ್ಯದ ತಳಹದಿಯ ಮೇಲೆ ನಿಂತಿದೆ. ಅದರ ನೆಲೆಯಲ್ಲಿ ಈ ಗ್ರಂಥ ಆಸ್ತಿಕತೆಯ ಬೆಳಕನ್ನು ಬೀರುತ್ತದೆ.

ಈ ಪುಸ್ತಕವನ್ನೋದಿದ ನಾಸ್ತಿಕರು ಆಸ್ತಿಕರಾಗಿಬಿಡುತ್ತಾರೆಂಬ ಭ್ರಮೆ ಇಲ್ಲ. ಆದರೆ ನಾಸ್ತಿಕ ಪ್ರಚಾರಕ್ಕೆ ಮರುಳಾಗತಕ್ಕವರನ್ನು ಅಲ್ಪಪ್ರಮಾಣದಲ್ಲಾದರೂ ಈ ಕೃತಿ ತಡೆದೀತು ಮತ್ತು ಸಂದೇಹಿಗಳಿಗೆ ಕೆಲವಕ್ಕಾದರೂ ಉತ್ತರ ದೊರಕೀತು.

(ಚೇತನಾ ಸಹಕಾರಿ ಆಫ್‌ಸೆಟ್ ಮುದ್ರಣ, ಶಿರಸಿ, ಫೋ. : 08384 - 227002)